ಬೆಲೆ: ಎರಡು ಆಣೆ

# ಕರ್ಮವೀರ

ಜಾಹೀರಾತಿಗಾಗಿ ವಿಚಾರಿಸಿರಿ

ಜಾಹೀರಾತಿಗಾಗಿ ವಿಚಾರಿಸಿರಿ

ಸಂಪಾದಕರು: ಹ. ರಾ. ಪುರೋಹಿತ, ಬಿ. ಎ. | ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ | Editor: H. R. Purohit, B. A.

ಸಂಪುಟ ೧೯ ] ೩೩೦ ಹುಬ್ಬಳ್ಳಿ ಸೋಮವಾರ ತಾರೀಖು ೨೧—೪—೧೯೪೮ ೩೩೦ [ ಸಂಚಿಕೆ ೩

# ಹಿಂದೀ ಆರ್ಥಿಕ ಸ್ಥಾನಮಾನದಲ್ಲಿ ಕ್ರಾಂತಿ

## ಪರಾಧೀನತೆಯ ನೊಗದಿಂದ ವಿಮೋಚನೆ ದೊರೆಯಲು ಕಾರಣ: ಅತುಲ ಸಮೃದ್ಧಿಯನ್ನು ಅಳವಡಿಸಿಕೊಳ್ಳಬಹುದು

—ಎಚ್. ಎನ್. ಬ್ರೇಲ್ಸಫೋರ್ಡರಿಂದ

**ಹಿಂದುಸ್ತಾನದ ರಾಜಕೀಯ ಕಾರ್ನೋಡಗಳ ಮೇಲೆಯೆ ಲಕ್ಷವಿಟ್ಟು ಅದರ ಭಾಗ್ಯದಲ್ಲಿ ಸಂದೇಹವಿಡುವವರಿರಬಹುದು. ಆದರೆ ಪ್ರಸಿದ್ಧ ಬ್ರಿಟಿಶ ಸಾಮ್ಯವಾದಿಗಳೂ ಹಿಂದುಸ್ತಾನದ ಗೆಳೆಯರೂ ಆದ ಬ್ರೇಲ್ಸಫೋರ್ಡರು ಆ ಮೋಡಗಳಾಚೆಗೆ ಕಣ್ಣು ಚುಚ್ಚಿ ಉಜ್ವಲ ಭವಿತವ್ಯವನ್ನು ಕಂಡಿದ್ದಾರೆ.**

ಹಲವು ಹಾದಿಗಳಿಂದ ಹಿಂದುಸ್ತಾನ ಸ್ವಾತಂತ್ರ್ಯದತ್ತ ಸಾಗಿದೆ. ಅವೆಲ್ಲ ಬೇಗನೆ ಸಂಗಮಿಸಲಿವೆ. ರಾಜಕಾರಣದ ಮಂಜು ಮುಸುಕಿದ್ದನ್ನು ಕಂಡು ನಾವು ಅದಕ್ಕೇ ಅತಿರೇಕ ಗಮನಕೊಡುವ ಸಂಭವವುಂಟು. ಒಡಂಬಡಿಕೆಯಿಂದಾಗಲಿ ಹೋರಾಟದಿಂದಾಗಲಿ, ಘಟನಾ ಸಮಿತಿಯನ್ನು ಎದುರಿಸಿರುವ ಜಟಿಲ ಸಮಸ್ಯೆಗಳನ್ನು ಬಿಡಿಸಿಯೆ ಬಿಡಿಸಲಾಗುವದು. ಆದರೆ ಯುದ್ಧಕಾಲದಲ್ಲಿ ಹಿಂದುಸ್ತಾನದಲ್ಲಾದ ಅತಿ ಪ್ರಾಮುಖ್ಯ ಪರಿವರ್ತನೆಯೆಂದರೆ, ಅದರ ಅರ್ಥಿಕ ಸ್ಥಾನಮಾನದ ಕ್ರಾಂತಿಕಾರಕ ಸ್ಥಿತ್ಯಂತರ. ಸಾಮ್ರಾಜ್ಯದ ಆಶ್ರಿತ ಅಧೀನ ದೇಶವಾಗಿದ್ದ ಅದೀಗ ಮಹಾಜನ ಸ್ಥಿತಿಯಿಂದ ಸಾಮ್ರಾಜ್ಯದ ಸಾವುಕಾರಿಕೆಗೇರಿದೆ. ಅದು ಸಾರ್ವಭೌಮ ಪ್ರಜಾರಾಜ್ಯವೆಂದು ಕೊನೆಗೊಮ್ಮೆ ಅಂಗೀಕರಿಸಿದರೆ, ಅಂಗೀಕರಿಸಿದಾಗ, ಅದರ ಔದ್ಯೋಗಿಕ ವಿಕಾಸದಿಂದ ಈಗಾಗಲೆ ಒದಗಿರುವ ಬದಲಾವಣೆಗೆ ಘಟನಾತ್ಮಕ ಶಾಸನಬದ್ಧ ಮನ್ನಣೆಯನ್ನು ಕೊಟ್ಟಂತಾಗುವದು, ಅಷ್ಟೆ.

ಅದರೂ ಈ ಉತ್ಕ್ರಾಂತಿ ಇನ್ನೂ ಪರಿಪೂರ್ಣತೆಯಿಂದ ದೂರವೇ ಇದೆ. ಪರಾಧೀನ ಸ್ಥಿತಿಯ ಪಶ್ಚಾತ್ ಫಲಗಳು ಹಿಂದುಸ್ತಾನವನ್ನು ಇನ್ನೊಂದು ತಲೆಮಾರಿನ ವರೆಗೆ ಕಾಡದಿರವು. ಪರಾಧೀನತೆಯಿಂದ ಅನೇಕ ಭಾಗಗಳಲ್ಲಿ, ಅದರಲ್ಲಿಯೂ ಅತಿ ಮಹತ್ವದ ಔದ್ಯೋಗಿಕ ವಿಕಾಸದಲ್ಲಿ, ಹಿಂದೀ ಪ್ರಗತಿ ಕುಂಠಿತವಾಯಿತು. ತನಗೆ ಬೇಕಾದ ಎಲ್ಲ ಯಂತ್ರೋಪಕರಣಗಳನ್ನೂ ಅದು ಹೊರಗಿಂದಲೇ ತರಿಸಬೇಕಾಗುವದೆಂದರೆ ತಪ್ಪಾಗದು. ಯುದ್ಧ ಮುಗಿಯುವ ವರೆಗೂ ವಿಮಾನಗಳ ಭಾಗಗಳನ್ನು ಜೋಡಿಸುವ ಮತ್ತು ಮೋಟಾರ ಕಾರು-ಲಾರಿಗಳ ಮೈ (ಬಾಡಿ) ಯನ್ನು ಕಟ್ಟುವ ಕಾರಖಾನೆಗಳು ಹಿಂದುಸ್ತಾನದಲ್ಲಿದ್ದರೂ ಯಾವುದೇ ಬಗೆಯ ಸ್ವಯಂ ಸಂಚಾಲಕ ಎಂಜಿನ್ನುಗಳನ್ನು ತಯಾರಿಸಬಲ್ಲ ಒಂದೇ ಒಂದು ಕಾರಖಾನೆ ಅಲ್ಲಿ ಇರಲಿಲ್ಲ. ಹಿಂದುಸ್ತಾನದ ಮೊಟ್ಟಮೊದಲ ನೌಕಾ ನಿರ್ಮಾಣ ಕಾರಖಾನೆ ಪ್ರಾರಂಭವಾದದ್ದು ಮೊನ್ನೆ ಮೊನ್ನೆ. ಈ ಔದ್ಯೋಗಿಕ ಯುಗದಲ್ಲಿ ಹಿಂದುಸ್ತಾನ ತನ್ನ ಕಾಲ ಮೇಲೆ ತಾನು ನಿಲ್ಲಬೇಕಾದರೆ ತುಂಬಿಕೊಳ್ಳಬೇಕಾದ ಕೊರತೆಗಳ ಯಾದಿಯನ್ನು ಎಷ್ಟುದ್ದ ಬೇಕಾದರೂ ಎಳೆಯಬಹುದು.

### ಮುಖ್ಯ ವಿದ್ಯಮಾನ

ಆದರೆ ಹೊಸದೊಂದು ವಿದ್ಯಮಾನ ಈಗ ತೂರಿದೆ. ಅದು ಅತ್ಯಂತ ನಿರ್ಣಾಯಕವಾದುದು. ಬ್ರಿಟನ್ನಿನಿಂದ ಹಿಂದುಸ್ತಾನಕ್ಕೆ ೧೩೫೦ ಕೋಟಿ ರೂಪಾಯಿ ಸ್ಟರ್ಲಿಂಗ ಸಾಲ ಬರಬೇಕಾಗಿದೆ. ಈ ಹಣದಿಂದ ಹಿಂದುಸ್ತಾನ ದೊಡ್ಡ ಮೂಲೋದ್ಯೋಗಗಳನ್ನು ಬೆಳೆಸಿಕೊಳ್ಳಬಲ್ಲದು. ಇದಕ್ಕಿಂತಲೂ ಹೆಚ್ಚಿನ ಸಂಗತಿ, ಪಂಡಿತ ಜವಾಹರಲಾಲರು ತೋರಿಸಿಕೊಟ್ಟಂತೆ ಅರೇ ವರ್ಷಗಳಲ್ಲಿ ಇಂಥ ಅಗಾಧ ಉಳಿತಾಯವನ್ನು ಕೂಡಹಾಕುವ ಶಕ್ತಿ ಹಿಂದುಸ್ತಾನಕ್ಕೆ ಇದೆಯೆಂಬುದು. ಹಿಂದೀಯರು ಯೋಗ್ಯ ಯೋಜನೆಗಳನ್ನು ಯೋಜಿಸಬಲ್ಲರಾದರೆ ರಭಸದಿಂದ ವಿಕಾಸ ಹೊಂದುವದು ಸಾಧ್ಯವಿದೆಯೆಂಬದಕ್ಕೆ ಇದು ಸಾಕ್ಷಿ.

ಯೋಜನೆ ಮಾಡುವದು ಅತ್ಯಂತ ಅವಶ್ಯವಾದ ಮಾತು. ಈಚೀಚೆಗೆ ಹಿಂದೀಯರು ಈ ಮಾತನ್ನು ಚನ್ನಾಗಿ ಮನಗಂಡೂ ಇದ್ದಾರೆ. ಪ್ರತಿಯೊಬ್ಬನೂ ಇಂದು ಯೋಜನೆಯಲ್ಲಿ ನಿರತನಾಗಿದ್ದಾನೆ. ಪಂಡಿತ ನೆಹರೂ ಅವರ ನೇತೃತ್ವದಲ್ಲಿ ಕಾಂಗ್ರೆಸ್ಸು ಅದನ್ನು ಎಷ್ಟೋ ವರ್ಷ ಹಿಂದೆಯೆ ಪ್ರಾರಂಭಿಸಿತ್ತು. ಆ ಮೇಲೆ ಪ್ರಮುಖ ಹಿಂದೀ ಉದ್ದಿಮೆಗಾರರು ತಾತಾ ಕಂಪನಿಯವರ ಮುಂದಾಳ್ತನದಲ್ಲಿ 'ಮುಂಬಯಿ ಯೋಜನೆ" ಯೆಂದು ಪ್ರಸಿದ್ಧವಾದ ಜನರ ಜೀವನದ ಸರ್ವಾಂಗಗಳನ್ನು ಮುಟ್ಟುವ ಯೋಜನೆಯನ್ನು ನಿರ್ಮಿಸಿದರು. ಈ ಉದಾಹರಣೆಯಿಂದ ಉತ್ತೇಜನಗೊಂಡ ಕೇಂದ್ರ ಸರಕಾರವೂ ಪ್ರಾಂತಿಕ ಸರಕಾರಗಳೂ ಕೆಲ ಸಂಸ್ಥಾನಗಳು ಕೂಡ ತಮ್ಮ ತಮ್ಮ ಹಂಚಿಕೆಗಳನ್ನು ಮಾಡ್ತಿಕೊಳ್ಳತೊಡಗಿದವು. ಇದಕ್ಕೆ ಬೇಕಾದ ಯಂತ್ರ ಸಾಮುಗ್ರಿಗಳನ್ನು ಕಾಲಾನುಭಾಗದಲ್ಲಿ ವಿದೇಶಗಳಿಂದ ತರಿಸಲಾಗುವದು.

ಆದರೆ ಯಾವುದೇ ದೊಡ್ಡ ಔದ್ಯೋಗಿಕ ಬೆಳವಣಿಗೆ ಅಗ್ಗವಾದ ಜಲ ವಿದ್ಯುತ ಶಕ್ತಿಯ ಪೂರೈಕೆಯನ್ನೆ ಅವಲಂಬಿಸುವದು. ಅದಕ್ಕೆ ಯಂತ್ರಜ್ಞ, ವ್ಯವಸ್ಥಾಪಕ, ತಂತ್ರಜ್ಞ, ಕುಶಲ ಕರ್ಮಕಾರರ ಒಂದು ಸೈನ್ಯವೇ ಬೇಕು. ಅವರನ್ನು ದೇಶದಲ್ಲಿಯೇ ತರಬೇತುಗೊಳಿಸಬೇಕು ಇಲ್ಲವೆ ಹೊರಗಿನಿಂದ ಕರೆಸಬೇಕು. ಕೊನೆಯದಾಗಿ, ಹಿಂದೀಯರು ಉತ್ಪಾದನೆಯನ್ನು ಬಹಳ ಬೆಳೆಸುವವರಿದ್ದರೆ ಅದಕ್ಕೆ ಸರಿಯಾಗಿ ಬಳಕೆಯನ್ನೂ ಹೆಚ್ಚಿಸಬೇಕಾಗುವದು. ಹುಟ್ಟುವಳಿಯ ಹೆಚ್ಚಳದ ಸಂಗಡವೇ ಸಬಲವಾದ ಬೇಡಿಕೆಯೂ ಇರಬೇಕು.

### ಕೊನೆಯಿಲ್ಲದ ಸಮಸ್ಯೆಗಳು

ಇದರ ಅರ್ಥವಿಷ್ಟೇ: ನೂರಕ್ಕೆ ೭೦ ರಷ್ಟು ದುಡಿಮೆಗಾರರು ಒಕ್ಕಲತನದಲ್ಲಿ ತೊಡಗಿರುವ ದೇಶದಲ್ಲಿ ಯಾವುದೊಂದು ಯೋಜನೆ ಧೂರ್ತವೆಂದೆನಿಸಬೇಕಾದರೆ ಅದು ಹಳ್ಳಿಯ ಜೀವನದ ಎಲ್ಲ ಅಂಗೋಪಾಂಗಗಳನ್ನು ಗಮನದಲ್ಲಿಟ್ಟು ಕೊಳ್ಳಬೇಕು. ಬಡತನದಲ್ಲಿ ಮುಳುಗೇಳುತ್ತಿರುವ ಹಳ್ಳಿಯ ದುಡಿಮೆಗಾರನು ಹೆಚ್ಚು ಬೇಕು. ಇದರಿಂದ ನೀರಾವರಿ, ಅಧುನಿಕ ವ್ಯವಸಾಯ ಪದ್ಧತಿಯ ಅವಲಂಬನ ಮೊದಲ್ಗೊಂಡು ರೈತನ ಗಂಟಲ ಗಾಣದಂತಿರುವ ಅಕರ್ಮಣ್ಯ ಜಮೀನುದಾರ, ಸಾವುಕಾರ, ದಲಾಲ ಮೊದಲಾದವರಿಂದ ಅವನ ಬಿಡುಗಡೆಯ ವರೆಗಿನ ಕೊನೆಯಿಲ್ಲದ ಸಮಸ್ಯೆಗಳನ್ನು ಹಿಂಜಬೇಕಾಗುವದು.

ಕೆಳ ದರ್ಜೆಯ ಹಿಂದೀ ಕೂಲಿಕಾರರು ತತ್ಸಮಾನ ಯುರೋಪಿಯನ್ನರಿಗಿಂತ ಕಡಿಮೆ ಕುಶಲರಾಗಿದ್ದಾರೆಂಬ ಮಾತು ಹಳೆಯದು. ಇದರಲ್ಲಿ ಏನು ವಿಚಿತ್ರ? ಹವಾಮಾನದ ಪರಿಣಾಮವನ್ನು ಬದಿಗಿಟ್ಟರೂ ಈ ಕೂಲಿಕಾರರಲ್ಲಿ ಓದುಬರಹ ಬಲ್ಲವರು ತೀರ ಕಡಿಮೆ. ಅದರಲ್ಲಿ ಅಧಿಕಾಂಶ ಜನರಿಗೆ ಸಾಕಷ್ಟು ಪೌಷ್ಟಿಕ ಅಹಾರ ದೊರೆಯುವದಿಲ್ಲ. ಅನೇಕರು ಮಲೇರಿಯ ಜ್ವರದಿಂದ ಹತವೀರ್ಯರಾಗಿದ್ದಾರೆ. ದೊಡ್ಡ ನಗರಗಳಲ್ಲಿರುವವರು ದಟ್ಟವಾದ ಹೊಲಗೇರಿಗಳಲ್ಲಿ ವಾಸಿಸಿ ಆರೋಗ್ಯ ಆತ್ಮವಿಶ್ವಾಸಗಳೆರಡನ್ನೂ ಕಳೆದುಕೊಂಡಿರುತ್ತಾರೆ.

ಯಂತ್ರಗಳನ್ನು ಆಯಾತ ಮಾಡಿ ಕಾರಖಾನೆಗಳನ್ನು ಸ್ಥಾಪಿಸುವದು ಔದ್ಯೋಗೀಕರಣದ ಕಾರ್ಯದ ಅತಿ ಸರಳ ಅಂಗ. ಹಳ್ಳಿಗಾಡಿನಲ್ಲಿಯೂ ನಗರದಲ್ಲಿಯೂ ಜನರ ಜೀವನದ ಮಟ್ಟವನ್ನು ಏರಿಸುವಗೋಸ್ಕರ ವಿಶಾಲವಾದ ರಾಷ್ಟ್ರೀಯ ಯೋಜನೆಯಿದ್ದರೆ ಮಾತ್ರ ಔದ್ಯೋಗೀಕರಣ ಧೋರಣೆ ಸಫಲವಾಗಬಲ್ಲದು. ಸಾಲೆ—ಅಸ್ಪತ್ರೆಗಳು, ಶಿಕ್ಷಕರು—ವೈದ್ಯರು, ಮಾರ್ಗಗಳು—ನಿವಾಸ ಯೋಗ್ಯ ಮನೆಗಳು ಇವೆಲ್ಲವೂ ಯಂತ್ರ-ಯಂತ್ರಜ್ಞರಷ್ಟೇ ಅವಶ್ಯವಾಗಿವೆ. ಕಡಿಮೆ ಬೆಲೆಯಲ್ಲಿ ಹೆಚ್ಚು ಅಹಾರ ಬೆಳೆಯುವದೇ ಈ ದಿಶೆಯಲ್ಲಿಡಬೇಕಾದ ಮೊದಲ ಹೆಜ್ಜೆಯಾಗಿರಬಹುದು. ಹೊಲವಿಲ್ಲದ ಹಳ್ಳಿಯ ಕೂಲಿಕಾರನ ಕೂಲಿಯನ್ನು ಏರಿಸುವದು ಎರಡನೆಯದಾಗಿರಬಹುದು.

### ಹಳ್ಳಿಯಿಂದಲೆ ಪ್ರಾರಂಭ

ಹಿಂದುಸ್ತಾನದ ಔದ್ಯೋಗೀಕರಣ ಹಳ್ಳಿಯಿಂದಲೇ ಪ್ರಾರಂಭವಾಗಬೇಕೆಂದು ಹೇಳಿದರೆ ಅದು ವಿರೋಧಾಭಾಸವೆಂದು ತೋರೀತಾದರೂ ಅದು ಅಕ್ಷರಶಃ ಸತ್ಯ. ಜನದಟ್ಟಣೆ ಅತಿಯಾಗಿರುವ ನಗರಗಳಲ್ಲಿ ಇನ್ನು ಯಾವ ಕಾರಖಾನೆಯನ್ನೂ ಹಾಕಬಾರದು. ಅಗ್ಗವಾದ ವಿದ್ಯುತ್ತು ದೊರಕುವಂತಾದಾಗ ಅವನ್ನು ಹಳ್ಳಿಗಳಲ್ಲಿ ಹಂಚಿ ಹಾಕುವದು ಸಾಧ್ಯವೂ ಇದೆ, ಅಪೇಕ್ಷಣೀಯವೂ ಹೌದು.

ತನ್ನ ಔದ್ಯೋಗೀಕರಣದ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳಲು ಹಿಂದುಸ್ತಾನ ಯಾವ ಯಾವ ಪ್ರಕೃತಿ ಸಮೃದ್ಧಿಯ ಮೇಲೆ ಭರವಸೆಯಿಡಬಹುದು? ಅದರ ಮೊಟ್ಟ ಮೊದಲನೆ ಅಸ್ತಿಯೆಂದರೆ ಜಲಶಕ್ತಿಯ ಧಾರಾಳ ಸಮೃದ್ಧಿ. ಹಿಮಾಲಯದ ಮಂಜನ್ನೇ ವಿದ್ಯುಚ್ಛಕ್ತಿಯಾಗಿ ಮಾರ್ಪಡಿಸಬಹುದು. ಹಿಂದುಸ್ತಾನದಲ್ಲಿ ಅನೇಕ ಮಹಾ ನದಿಗಳಿವೆ. ಅವುಗಳಲ್ಲಿ ಕೆಲವು ಸ್ವೈರ ಪ್ರವೃತ್ತಿಯವಾಗಿದ್ದು ಮಹಾಪೂರದ ಚಟಕ್ಕೆ ಬಿದ್ದಿವೆ. ಅವುಗಳನ್ನೆಲ್ಲ ಹಿಡಿತಕ್ಕೆ ತಂದು ದೇಶದ ಬಂಜರು ಭೂಮಿಯನ್ನು ಕೃಷಿ ಮಾಡಲಿಕ್ಕೂ ಕೈಗಾರಿಕೆಯ ಯಂತ್ರಗಳನ್ನು ತಿರುಗಿಸಲಿಕ್ಕೂ ಬಳಸಿಕೊಳ್ಳಬಹುದು. ಈಗಾಗಲೆ ಇಂಥ ಕೆಲಸಗಳನ್ನು ದೊಡ್ಡ ಪ್ರಮಾಣದಲ್ಲಿ ಮುಖ್ಯವಾಗಿ ಸಿಂಧ-ಪಂಜಾಬಗಳಲ್ಲಿ ಸಾಧಿಸಿ ತೋರಲಾಗಿದೆ. ಸಿಂಧುವಿನ ಹೆಸರಾಂತ ಸಕ್ಕರ ಅಣೆಕಟ್ಟು ಲಕ್ಷಾಂತರ ಎಕರೆ ಬಂಜರು ಭೂಮಿಯನ್ನು ಫಲವತ್ತಾದ ಹೊಲಗಳಾಗಿ ಪರಿವರ್ತಿಸಿದೆ. ಅಲ್ಲಿಂದು ಸಂಪನ್ನ ರೈತರ ವಸತಿಗಳು ಬೆಳೆದಿವೆ. ಇನ್ನೊಂದು ಅಣೆಕಟ್ಟು ಈಗ ನಿರ್ಮಾಣವಾಗುತ್ತಿದೆ.

ಪಂಜಾಬದಲ್ಲಿ ಈ ಕೆಲ ತಿಂಗಳಿಂದ ನಡೆಯುತ್ತಿರುವ ದುರ್ಘಟನೆಗಳಿಂದ, ಅಲ್ಲಿ ಬೇಗನೆ ವಿದ್ಯುಚ್ಛಕ್ತಿ ಮತ್ತು ಬಂಜರು ಭೂಮಿಯ ಕೃಷಿಯ ಯೋಜನೆಗಳಿಂದ ಒದಗಬಹುದಾದ ಮಹೋಪಯೋಗಗಳು ಮರೆತು ಹೋಗುವ ಸಂಭವವುಂಟು. ಬಂಗಾಲ-ಬಿಹಾರಗಳ ದಾಮೋದರ ಕಣಿವೆ ಯೋಜನೆಯಂಥ ಕೆಲ ಹೊಸ ಯೋಜನೆಗಳು ಅಮೇರಿಕನ್ ಎಂಜಿನಿಯರರಿಂದ ಟೆನೆಸಿ ಕಣಿವೆ ಯೋಜನೆಯ ಮಾದರಿಯಲ್ಲಿ ಯೋಜಿಸಲ್ಪಟ್ಟಿವೆ. ಅವುಗಳಲ್ಲಿ ಹಲ ಕೆಲವು ಆ ಮಹಾ ಅದರ್ಶಕ್ಕಿಂತಲೂ ಅಗಾಧವಾಗಿವೆ. ಗೋದಾವರೀ ತೀರದಲ್ಲಿ ಅದರ ಶಕ್ತಿಯನ್ನು ಉಪಯೋಗಿಸಲು ಕಬ್ಬಿಣ ಉಕ್ಕಿನ ಕಾರಖಾನೆಯ ಕೇಂದ್ರವಾದ ಒಂದು ಮಾದರಿ ನಗರವನ್ನು ಕಟ್ಟಲು ಹೈದರಾಬಾದ ಸಂಸ್ಥಾನ ಹಂಚಿಕೆ ಹಾಕಿದೆ. ಈ ಹಂಚಿಕೆಗಳಿಂದ ಹಿಂದುಸ್ತಾನದ ಆಹಾರೋತ್ಪಾದನೆ ಲಕ್ಷಾಂತರ ಟನ್ನುಗಳಷ್ಟು ಹೆಚ್ಚುವದಲ್ಲದೆ ಅದರ ವಿಕೇಂದ್ರೀಕೃತ ಉದ್ಯೋಗಗಳಿಗೆ ಬೇಕಾದ ವಿದ್ಯುತ್ತ ಪೂರೈಕೆಯಾಗುವಂತಿದೆ.

ಭಾರೀ ಉದ್ಯೋಗಗಳಿಗೆ, ಅದರಲ್ಲಿಯೂ ಯಂತ್ರ ಮತ್ತು ಯಂತ್ರೋಪಕರಣಗಳನ್ನು ಉತ್ಪಾದಿಸುವವುಗಳಿಗೆ, ಪ್ರಾಧಾನ್ಯ ಕೊಡಲಾಗುವದು. ಜಗತ್ತಿನಲ್ಲೆಲ್ಲ ಶ್ರೇಷ್ಠ ಜಾತಿಯ ಕಬ್ಬಿಣದ ಅದರುಗಳು ಕೆಲವು ಹಿಂದುಸ್ತಾನದಲ್ಲಿವೆ. ಅವು ಉತ್ತಮ ಕಲ್ಲಿದ್ದಲಿಯ ಕಣಗಳ ಸಮೀಪದಲ್ಲಿಯೂ ಇವೆ. ಹಿಂದೀ ಭಾರೀ ಉದ್ಯೋಗಗಳಲ್ಲಿ ಟಾಟಾರವರೇ ಮೊದಲಿಗರು. ಅವರು ಜಮಶೇದಪುರದಲ್ಲಿ ಕಟ್ಟಿದ ಮಾದರಿ ಉಕ್ಕಿನ ನಗರ ಜಗತ್ತಿನಲ್ಲೆಲ್ಲ ಆ ಬಗೆಯ ಅತಿ ಹಿರಿಯ ಹಾಗು ಸಾಧನಸಂಪನ್ನ ಸಂಸ್ಥೆಗಳಲ್ಲೊಂದಾಗಿದೆ. ಅಮೇರಿಕನ್, ಜರ್ಮನ್ ಮತ್ತು ಬ್ರಿಟಿಶ ವ್ಯವಸ್ಥಾಪಕರನ್ನಿಟ್ಟುಕೊಂಡು ಪ್ರಾರಂಭವಾದ ಈ ಕಾರಖಾನೆ ಇಂದು ಸಂಪೂರ್ಣ ಹಿಂದೀ ಆಡಳಿತೆಯಲ್ಲಿದೆಯೆನ್ನಬಹುದು. ತಾವು ತರಬೇತುಗೊಳಿಸಿದ ೩೦೦೦೦ ಕೂಲಿಕಾರರನ್ನು ಅಮೇರಿಕನ್ನರು ಒಳಿತಾಗಿ ಪ್ರಶಂಸಿಸಿದ್ದಾರೆ. ಆ ಕೂಲಿಕಾರರು ಉತ್ತಮ ವಸತಿ ಸಾಕಷ್ಟು ಆಹಾರ ಇವುಗಳಿಂದ ಬಹಳ ಬೇಗನೆ ಕುಶಲತೆಯನ್ನು ಸಂಪಾದಿಸಿದ್ದಾರೆ.

### ಖನಿಜಗಳಿಗಾಗಿ ಹುಡುಕಾಟ

ಇಲ್ಲಿ ಸ್ವಲ್ಪ ಚಿಂತೆಗೆ ಕಾರಣವಾದ ಒಂದೇ ಒಂದು ಕೊರತೆಯುಂಟು. ಹಿಂದುಸ್ತಾನದಲ್ಲಿ ಕೀಳ್ತರದ ಕಲ್ಲಿದ್ದಲಿ ವಿಪುಲವಾಗಿದ್ದರೂ ಉತ್ತಮ ಕಲ್ಲಿದ್ದಲಿ ಈಗಿನ ಅಳವಿನಲ್ಲಿ ಬರಿ ೬೦ ವರ್ಷಗಳ ಮಟ್ಟಿಗೆ ಸಾಕೀತು. ಅದರೆ ಉರವಲ ಮಿತವ್ಯಯದ ಸಂಶೋಧನೆಗಳು ರಭಸದಿಂದ್ಯ ಸಾಗಿವೆ. ಅದರ ನಂತರ ಹೇಳಬೇಕಾದರೆ ಉತ್ತಮ ಮಂಗನೀಸ ಮತ್ತು ಬಾಕ್ಸಾಯಿಟ ಖನಿಜಗಳು ಹಿಂದುಸ್ತಾನದಲ್ಲಿ ಸಾಕಷ್ಟು ಇವೆ. ಕಚ್ಚಾ ಪದಾರ್ಥಗಳನ್ನು ನಿರ್ಯಾತ ಮಾಡುವಬದಲು ತಾನೇ ತನ್ನ ಅಲುಮಿನಿಯಂ ಮತ್ತು ಅದರ ಮಿಶ್ರಿತಗಳನ್ನು ರೂಪಿಸಿಕೊಳ್ಳಬೇಕೆಂದು ಹಿಂದುಸ್ತಾನ ಪಟತೊಟ್ಟಿದೆ. ಅಭ್ರಕಕ್ಕೂ ಇದೇ ಮಾತು ಅನ್ವಯಿಸುವದು. ಕೆಲ ದುರ್ಲಭ ಖನಿಜಗಳು ಹಿಂದುಸ್ತಾನದಲ್ಲಿರುವವಲ್ಲದೆ ಅಸಾಮದಲ್ಲಿ ಕೆಲ ಕಲ್ಲೆಣ್ಣೆ ಗಣಿಗಳೂ ಇವೆ. ಹಿಂದುಕುಶ ಪರ್ವತ ಪ್ರದೇಶದಲ್ಲಿ ತಾಮ್ರ ಮತ್ತು ಇತರ ಖನಿಜಗಳ ಸಮೃದ್ಧಿಯುಂಟೆಂದು ತಿಳಿದುಬಂದಿದೆ. ಅದಕ್ಕೆ ಇನ್ನೂ ಕೈಹಚ್ಚಿಲ್ಲ;

ಹಿಂದುಸ್ತಾನದ ಭೂಮಿಯಲ್ಲಡಗಿದ ಸಮೃದ್ಧಿಯ ಅರಿವು ಇನ್ನೂ ಸರಿಯಾಗಿ ಆಗಿಲ್ಲ. ಈಗೊಂದು ಶತಮಾನದಿಂದ ಭೂಗರ್ಭ ಸಂಶೋಧನೆ ಬಹಳ ಮಂದಗತಿಯಿಂದ ಸಾಗಿದೆ. ಆದರೂ ಅದರ ಸೂಕ್ಷ್ಮ ಅವಲೋಕನ ಈ ವಿಸ್ತಾರ ಉಪಖಂಡದ ತೃತೀಯಾಂಶವನ್ನಷ್ಟೇ ವ್ಯಾಪಿಸಿದೆ. ಹಿಂದುಸ್ತಾನದ ಖನಿಜ ಸಂಪತ್ತಿಯಲ್ಲಿ ಥೋರಿಯಂ ಕೂಡ ಉಲ್ಲೇಖಾರ್ಹವಾಗಿದೆ. ಅದು ತಿವಾಂಕೂರಿನಲ್ಲಿ ಸಿಗುತ್ತದೆ. ಒಂದಾನೊಂದು ಕಾಲದಲ್ಲಿ ಇದು ಅಣುಶಕ್ತಿಯ ಉತ್ಪಾದನೆಗೆ ಉಪಯುಕ್ತವಾಗಬಹುದು.

ಹಿಂದುಸ್ತಾನ ತನ್ನ ಔದ್ಯೋಗಿಕ ಬೆಳ[illegible]ಗಾಗಿ ಅವಲಂಬಿಸಬಹುದಾದ ನಿಸರ್ಗ[illegible]ಯಲ್ಲಿ ಇವು ಕೆಲವು- ಇವಲ್ಲದೆ ಇನ್ನೂ ಹಲವನ್ನು ಹೆಸರಿಸಬಹುದು—ಹತ್ತಿ, ಸಣಬು, ಕಾಳಂಬಿಯಿಂದ ಹುಟ್ಟಿಸಬಹುದಾದ ಔದ್ಯೋಗಿಕ ಮದ್ಯ, ಬಿದಿರಿನಿಂದ ಕಾಗದ, ಮತ್ತು ಅತುಲ ಕಾನನ ಸಂಪತ್ತಿ ಸ್ವಾತಂತ್ರ್ಯ ಲಭಿಸಿಂದರೆ, ಇದಿ ಬ್ರಿಟಿಶ ಆಳಿಕೆಯ ಕಾಲದಲ್ಲಿ ಅದನ್ನು ಕಚ್ಚಾ ಸಾಮುಗ್ರಿಗಳ [illegible]ಗರ ಮತ್ತು ಅಯಾತ ಸಿದ್ಧ ಸಾಮುಗ್ರಿಗಳ ಪೇಟೆಯನ್ನಾಗಿ ಮಾರ್ಪಡಿಸಿ ಔದ್ಯೋಗಿಕ ವಿಕಾಸವನ್ನು ತಡೆದು ಭಾರವನ್ನಿಳಿಸಿದಂತಾಗುವದು.

—೧೫ ನೇ ಪುಟಕ್ಕೆ




## ಆತ್ಮಜ್ಞಾನಿ ಅಲ್ಲಮಪ್ರಭು

ಲೇ— ಶ್ರೀ ಒ. ಎಸ್. ಲಿಂಗಣ್ಣಯ್ಯ ಬಿ. ಎ. (ಆನರ್ಸ) ಬೆಂಗಳೂರಿನ ಶ್ರೀಶೈಲಕುಮಾರ ಗ್ರಂಥಮಾಲೆ. ಎಂಟು ಪೇಜು ಕ್ರೌನ ಅಷ್ಟಪತ್ರದ ೧೪೪ ಪುಟಗಳು ಬೆಲೆ ೧—೪—೦

ವೀರಶೈವ ಧರ್ಮದಲ್ಲಿ ಅಗ್ರಗಣ್ಯರೂ ಅವತಾರ ಪುರುಷರೂ ಆಗಿರುವ ಆತ್ಮಜ್ಞಾನಿ ಅಲ್ಲಮಪ್ರಭುಗಳ ದಿವ್ಯ ಚರಿತ್ರ ನಿರೂಪಿಸುವ ಗ್ರಂಥ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಕಡಮೆ. ಹರಿಹರ, ಚಾಮರಸ ಮೊದಲಾದ ಕವಿಗಳು ಮಾತ್ರ ತಮ್ಮ ಕಾವ್ಯಗಳಲ್ಲಿ ಪ್ರಭುಗಳ ಚರಿತ್ರವನ್ನು ಬಣ್ಣಿಸಿದ್ದಾರೆ. ಪ್ರಸ್ತುತ ಲೇಖಕರು ಚಾಮರಸನ ಕಥಾರೀತಿಯನ್ನನುಸರಿಸಿ ಪ್ರಭುದೇವರ ದಿವ್ಯ ಚರಿತ್ರವನ್ನು ಇದರಲ್ಲಿ ವಿವರಿಸಿದ್ದಾರೆ. ಶ್ರೀ ಸಿದ್ಧಗಂಗಾಮಠದ ಶ್ರೀಶಿವಕುಮಾರ ಸ್ವಾಮಿಗಳು ಇದಕ್ಕೆ ಮುನ್ನುಡಿ ಬರೆದು ಈ ಗ್ರಂಥವು ಜನಾದರಣೀಯವಾಗಲೆಂದು ಹರಸಿದ್ದಾರೆ. ಪ್ರಭುಗಳಂಥ ಸಿದ್ಧಪುರುಷರ ಚರಿತ್ರೆಯು ವಿವರಣೆಯೆಂದರೆ ವೀರಶೈವ ಧರ್ಮದ ತತ್ವಗಳ ನಿರೂಪಣೆಯೆಂದು ಬೇರೆ ಹೇಳುವ ಅವಶ್ಯಕತೆಯಿಲ್ಲ. ಆದುದರಿಂದ ಕನ್ನಡ ಬಲ್ಲವರೆಲ್ಲ ಈ ಪುಸ್ತಕವನ್ನೋದಿ ವೀರಶೈವಾಗ್ರಣಿಯ ಚರಿತ್ರೆಯನ್ನು ಮತ್ತು ವೀರಶೈವ ಧರ್ಮತತ್ವಗಳನ್ನು ತಿಳಿದುಕೊಳ್ಳಬೇಕೆಂದು ಸೂಚಿಸಬಯಸುತ್ತೇವೆ.

## ಇಷ್ಟಲಿಂಗ ವಿಜ್ಞಾನ

ಗ್ರಂಥಕರ್ತರು ವಿಮರ್ಶವಿಶಾರದ ಜಿ. ಬಿ. ಅಕ್ಕಲಯ್ಯ ದೀಕ್ಷಿತ. ಸಂಪಾದಕರು ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಯ್ಯ. ಪ್ರಬೋಧ ಪುಸ್ತಕ ಮಾಲೆಯ ಮೊದಲನೆಯ ಕುಸುಮ. ಜಿ. ವಿ. ಛತ್ರ ಚಿಕ್ಕಪೇಟೆ ಬೆಂಗಳೂರು ನಗರ. ಕ್ರೌನ ಅಷ್ಟ ಪತ್ರದ ೯೬ ಪುಟಗಳು. ಬೆಲೆ ೧ ರೂಪಾಯಿ.

ವೀರಶೈವ ಮತದ ಮುಖ್ಯ ತತ್ವಗಳಾದ ಇಷ್ಟಲಿಂಗ, ಷಟ್‌ಸ್ಥಲಗಳು, ಪ್ರಣವ, ಮಂತ್ರ ಮೊದಲಾದ ವಿಷಯಗಳನ್ನು ಪ್ರಸ್ತುತ ಲೇಖಕರು ವೈಜ್ಞಾನಿಕ ದೃಷ್ಟಿಯಿಂದ ವಿವೇಚಿಸಿದ್ದಾರೆ. ಧಾರ್ಮಿಕ ತತ್ವಗಳನ್ನು ಇಂಥ ವೈಜ್ಞಾನಿಕ ದೃಷ್ಟಿಯಿಂದ ವಿವೇಚಿಸಿದ ಗ್ರಂಥ ಕನ್ನಡದಲ್ಲಿ ಇಲ್ಲವೆಂದು ಹೇಳಬಹುದು. ತೆಲುಗಿನಲ್ಲಿ ಪ್ರತಿಪಾದಿತವಾದ ಈ ಗ್ರಂಥವನ್ನು ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯರವರು ಕನ್ನಡದಲ್ಲಿ ಅನುವಾದ ಮಾಡಿ ಕನ್ನಡಿಗರಿಗೆ ಮಹದುಪಕಾರ ಮಾಡಿದ್ದಾರೆ. ಪ್ರಿನ್ಸಿಪಲ್ ಜಿ. ಎಸ್. ಪರಮಶಿವಯ್ಯನವರು ಇದಕ್ಕೆ ಮುನ್ನುಡಿ ಬರೆದು ಲೇಖಕರು ವೈಜ್ಞಾನಿಕ ದೃಷ್ಟಿಯಿಂದ ಇಷ್ಟಲಿಂಗ ತತ್ವವನ್ನು ಪ್ರತಿಪಾದಿಸಿದ್ದಕ್ಕಾಗಿ ಅವರನ್ನಭಿನಂದಿಸಿ ಕನ್ನಡಿಗರು ಇದರ ಲಾಭ ಪಡೆಯಬೇಕೆಂದು ಸೂಚಿಸಿದ್ದಾರೆ. ಈ ವಿಷಯದಲ್ಲಿ ಆಸ್ಥಾನ ವಿದ್ವಾನರು ವಿಶಾಲ ಗ್ರಂಥವನ್ನು ಬರೆದು ಆ ಕೊರತೆಯನ್ನು ಹೋಗಲಾಡಿಸಬೇಕೆಂದೂ ಬಯಸಿದ್ದಾರೆ. ಕನ್ನಡಿಗರು ಲೇಖಕರನ್ನು ಸರ್ವ ರೀತಿಯಿಂದ ಪ್ರೋತ್ಸಾಹಿಸಬೇಕಾಗಿ ಕೋರುತ್ತೇವೆ.

## ಮನೆ ಮದ್ದು

ಲೇ:— ಡಾಕ್ಟರ 'ಕೊರಡ್ಕಲ್' ವೆಂಕಟ್ರಾವ— ಪ್ರಕಾಶಕರು ನವಭಾರತ ಪುಸ್ತಕ ಭಾಂಡಾರ ಉಡುಪಿ. ಕ್ರೌನ ಅಷ್ಟಪತ್ರದ ೧೪೦ ಪುಟಗಳು. ಬೆಲೆ ೨ ರೂಪಾಯಿ.

ಆಯುರ್ವೇದೀಯ ಔಷಧಗಳು ಪಾಶ್ಚಾತ್ಯ ಔಷಧಗಳ ಪ್ರಭಾವದಿಂದ ಹಿಂದೆ ಬಿದ್ದಿರುವ ಈ ಸಮಯದಲ್ಲಿ ಡಾ. ಕೊರಡ್ಕಲ್ ವೆಂಕಟ್ರಾವರು ಈ 'ಮನೆಮದ್ದು' ಪುಸ್ತಕವನ್ನು ಪ್ರಸಿದ್ಧಿಸಿ ಒಳ್ಳೆ ಉಪಕಾರ ಮಾಡಿದ್ದಾರೆ. ಈ ಪುಸ್ತಕದಲ್ಲಿ ಮೂರು ಭಾಗಗಳಿವೆ. ಮೊದಲನೆ ಭಾಗದಲ್ಲಿ ಮಕ್ಕಳ ಕಾಹಿಲೆ ಮತ್ತು ಆರೈಕೆ, ಎರಡನೇ ಭಾಗದಲ್ಲಿ ಹೆಂಗಸರ ಕಾಹಿಲೆ ಮತ್ತು ಗರ್ಭಿಣಿ, ಪ್ರಸವ ಬಾಣಂತಿತನದ ಆರೈಕೆ ಮತ್ತು ಸೌಂದರ್ಯ ಸಾಧನಗಳು, ಮೂರನೆ ಭಾಗದಲ್ಲಿ ಎಲ್ಲ ಸಾಮಾನ್ಯ ಕಾಹಿಲೆಗಳು ಅವುಗಳ ಲಕ್ಷಣ ಮತ್ತು ಚಿಕಿತ್ಸೆಗಳು ವಿವರಿಸಲ್ಪಟ್ಟಿವೆ. ಆಯುರ್ವೇದ ಶಾಸ್ತ್ರರೀತ್ಯಾ ಮತ್ತು ತಮ್ಮ ಅನುಭವದಿಂದ ಸಿದ್ಧವಾದ ಮದ್ದುಗಳನ್ನು ಆಯಾ ಕಾಹಿಲೆಗಳಿಗೆ ಡಾಕ್ಟರರು ಸೂಚಿಸಿದ್ದಾರೆ. ರೋಗಿಗಳು ಅವುಗಳ ಉಪಯೋಗ ಮಾಡಿಕೊಂಡು ರೋಗಗಳನ್ನು ನಿವಾರಿಸಿಕೊಳ್ಳಬೇಕು. ವಿಶೇಷತಃ ಡಾಕ್ಟರ, ವೈದ್ಯರು ಸಿಕ್ಕದಿರುವ ಹಳ್ಳಿಗಾಡುಗಳಲ್ಲಿ ಇದರ ಉಪಯುಕ್ತತೆ ಹೆಚ್ಚಾಗಿದೆ. ಇಂಥ ಪುಸ್ತಕಗಳು ಹೆಚ್ಚಾದಷ್ಟು ಅವಶ್ಯವೆ. ಕ್ಯಾಪ್ಟನ್ ಜಿ. ಶ್ರೀನಿವಾಸ ಮೂರ್ತಿಯವರು ಇದಕ್ಕೆ ಚಿಕ್ಕ ಮುನ್ನುಡಿಯನ್ನು ಬರೆದು ಅಜ್ಜಿಯಂದಿರ ಕಾಲದ ಜ್ಞಾನಾನುಭವಗಳನ್ನು ಹಾನಿಯಿಲ್ಲದೆ ಇಂದಿಗೆ ತಕ್ಕಂತೆ ಸುಧಾರಿಸಿಕೊಳ್ಳುವದವಶ್ಯವಾಗಿದೆಂದು ಹೇಳಿ ಪ್ರಸ್ತುತ ಗ್ರಂಥ ಕರ್ನಾಟಕದಲ್ಲೆಲ್ಲ ಪ್ರಸಾರ ಹೊಂದಲೆಂದು ಹಾರಯಿಸಿದ್ದಾರೆ.

## ಶ್ರೀ ಗೋದಾದೇವಿ ಕರುಣಿಸಿ ರಚಿಸಿದ ತಿರುಪ್ಪಾವೈ

ಅನುವಾದಕರು ಶ್ರೀ ಅಯ್ಯಂಗಾರ್ ನ. ಶ್ರೀನಿವಾಸೈಯ್ಯಂಗಾರ್. ಫುಲಸ್ಕೇಪ ಅಷ್ಟಪತ್ರ ೧೦೦ ಪುಟಗಳು, ಬೆಲೆ ಸಾದಾ ಪ್ರತಿ ಹತ್ತಾಣೆ, ಹಾಲು ಕಾಗದದ ಪ್ರತಿ ಒಂದು ರೂಪಾಯಿ ಕ್ಯಾಲಿಕೊ ಪ್ರತಿ ಒಂದೂವರೆ ರೂಪಾಯಿ. ಶ್ರೀ ಶಾನುದಾಸ ಗ್ರಂಥಮಾಲಾ ಬಾಗೇಪಲ್ಲಿ ಹಾಸನ ಜಿಲ್ಲೆ.

ತಮಿಳ ನಾಡಿನ ವೈಷ್ಣವ ಭಕ್ತಳಾದ ಅಂಡಾಳ್ ಗೋದಾ ಇವಳನ್ನು ಕುರಿತು ಈ ಚಿಕ್ಕ ಪುಸ್ತಕದಲ್ಲಿ ವಿವರಿಸಲಾಗಿದೆ. ಅಂಡಾಳ್ ಇವಳು ಶ್ರೀರಂಗದ ಶ್ರೀರಂಗನಾಥನನ್ನೇ ಮದುವೆಯಾಗಬೇಕೆಂದು ಚಿಕ್ಕಂದಿನಲ್ಲೇ ನಿರ್ಧರಿಸಿ ಕೊನೆಗೆ ಶ್ರೀರಂಗನಾಥನಲ್ಲಿಯೆ ಐಕ್ಯವಾದಳು. ಹೀಗೆ ಐಕ್ಯವಾಗುವ ಮುನ್ನ ಅವಳು ಕೆಲವು ಭಕ್ತಿಕೃತಿಗಳನ್ನು ರಚಿಸಿರುವಳು. ಇವು ಭಕ್ತಿ ಪ್ರತಿಪಾದಕವಾದವುಗಳಾಗಿರುವಾಗಲೆ ಉತ್ತಮ ಸಾಹಿತ್ಯ ಕೃತಿಗಳೂ ಆಗಿರುವವು. ಇಂಥ ಮಹಾ ಮಹಿಮಳ ಚರಿತ್ರವನ್ನು ಅಧಿಕಾರಸಂಪನ್ನರಾದ ಅಯ್ಯಂಗಾರರು ಬರೆದುದು ತುಂಬ ಶ್ಲಾಘನೀಯವಾಗಿದೆ. ಗೋದಾ ಪ್ರಬಂಧಗಳ ಬಗ್ಗೆಯೂ ಈ ಪುಟ್ಟ ಪುಸ್ತಕದಲ್ಲಿ ವಿವರಣೆ ಮಾಡಲಾಗಿದೆ. ಕನ್ನಡಿಗರು ತಮಿಳ ಭಕ್ತೆ ಅಂಡಾಳ್‌ಳ ಜೀವನ ಚರಿತ್ರೆಯನ್ನು ತಿಳಿದುಕೊಳ್ಳುವುದಲ್ಲದೆ ಅವಳ ಭಕ್ತಿ ಪ್ರಬಂಧಗಳ ಸವಿಯನ್ನು ಸವಿಯಬೇಕೆಂದು ಸೂಚಿಸಬಯಸುತ್ತೇವೆ. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು ಇದಕ್ಕೆ ಚಿಕ್ಕ ಮುನ್ನುಡಿಯನ್ನು ಬರೆದು ಪುಸ್ತಕ ಕನ್ನಡಿಗರ ಮೆಚ್ಚುಗೆಗೆ ಪಾತ್ರವಾಗಲೆಂದು ಹರಸಿದ್ದಾರೆ.

## ಪ್ರಾಚೀನ ಹಿಂದುಸ್ಥಾನ

ಲೇ— ಎಸ್. ಆರ್. ದೇಶಪಾಂಡೆ ಬಿ. ಎ ಬಿ. ಟಿ. ಬಿ. ಕೆ. ಮಾಡೆಲ್ ಹಾಯಸ್ಕೂಲ ಬೆಳಗಾವಿ ಕ್ರೌನ ಅಷ್ಟಪತ್ರದ ೯೬ ಪುಟಗಳು. ಬೆಲೆ ಹತ್ತಾಣೆ.

ಇದೀಗ ಇತಿಹಾಸ, ಭೂಗೋಲ, ಶಾಸ್ತ್ರೀಯ ವಿಷಯ ಮೊದಲಾದವುಗಳನ್ನು ಆಯಾ ಪ್ರಾಂತೀಯ ಭಾಷೆಗಳಲ್ಲಿ ಕಲಿಸಬೇಕೆಂದು ಯೋಜಿಸಲಾಗಿದೆ. ಆಯಾ ಪ್ರಾಂತೀಯ ಭಾಷೆಗಳಲ್ಲಿ ಪಠ್ಯಪುಸ್ತಕಗಳಿಲ್ಲೆಂಬ ಕೂಗು ಕೇಳಬರುತಿದೆ. ಇದರ ನಿವಾರಣೆ ಮಾಧ್ಯಮಿಕ ಶಾಲೆಗಳಲ್ಲಿಯ ಅನೇಕ ಶಿಕ್ಷಕರು ಈಗಲೂ ಇಂಗ್ಲಿಷಿನಲ್ಲಿಯೆ ಪಾಠ ಹೇಳಿಕೊಡುವ ಮೋಹಕ್ಕೊಳಗಾಗಿರುವರು. ಈ ಸಮಯದಲ್ಲಿ ಶ್ರೀ. ದೇಶಪಾಂಡೆಯವರು ಪ್ರಾಚೀನ ಹಿಂದುಸ್ಥಾನವೆಂಬ ಪುಸ್ತಕವನ್ನು ಬರೆದು ಶಾಲೆಯ ಮಕ್ಕಳ ಮೇಲೆ ಉಪಕಾರ ಮಾಡಿದ್ದಾರೆ. ಮುಂಬಯಿ ವಿಶ್ವವಿದ್ಯಾಲಯದ ಮ್ಯಾಟ್ರಿಕ್ ಮತ್ತು ಮುಲ್ಕಿಪರೀಕ್ಷೆಯ ವಿದ್ಯಾರ್ಥಿಗಳಿಗೆ ಇದು ಉಪಯುಕ್ತವಾಗಿದೆ. ಸರಳ ಭಾಷೆಯಲ್ಲಿ ಬರೆಯಲ್ಪಟ್ಟ ಈ ಪುಸ್ತಕದ ಉಪಯೋಗವನ್ನು ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಮಾಡಿಕೊಂಡು ಇಂಥವೇ ಉಪಯುಕ್ತ ಪುಸ್ತಕಗಳನ್ನು ಬರೆಯಲು ಲೇಖಕರನ್ನು ಪ್ರೋತ್ಸಾಹಿಸಬೇಕೆಂದು ಸೂಚಿಸುತ್ತೇವೆ.

## ರಸವೈದ್ಯ

ಬೆಲೆ ೩—೦—೦ ಲೇಖಕರು ಮತ್ತು ಪ್ರಕಾಶಕರು— ವೈದ್ಯಗುರು ಡಾ. ಆ. ಹಲಸೀಕರ. ಆತ್ರೇಯ ಸದನ ಹುಬ್ಬಳ್ಳಿ.

ಆಯುರ್ವೇದದ ಅಭ್ಯಾಸಕ್ರಮದಲ್ಲಿ ಔಷಧ ನಿರ್ಮಾಣ ವಿಜ್ಞಾನವು ಒಂದು ಮಹತ್ವದ ಅಂಗವಾಗಿದೆ. ವೈದ್ಯನು ತಾನು ಉಪಯೋಗಿಸುತ್ತಿರುವ ಔಷಧಗಳಲ್ಲಿಯ ದ್ರವ್ಯಗಳು ಅವುಗಳ ಗುಣಾವಗುಣಗಳನ್ನರಿತವನಲ್ಲದೆ ಸ್ವತಃ ಔಷಧಗಳನ್ನು ತಯಾರಿಸಲು ಸಮರ್ಥನಾಗಿರಬೇಕು. ಅದಕ್ಕಾಗಿ ಔಷಧೀಕರಣದ ಪ್ರತ್ಯಕ್ಷ ಜ್ಞಾನವನ್ನು ಗುರುಮುಖದಲ್ಲಿ ಮಾಡಿಕೊಡಲಾಗುತ್ತಿತ್ತು.

"ರಸವೈದ್ಯ" ವು ಈ ಔಷಧ ನಿರ್ಮಾಣ ವಿದ್ಯೆಯಲ್ಲಿ ಒಳ್ಳೆ ಮಾರ್ಗದರ್ಶಕವಾದ ಗ್ರಂಥವಾಗಿದೆ. ಮೊದಲನೆಯ ವಿಭಾಗದಲ್ಲಿ ಔಷಧ ತಯಾರಿಕೆಯಲ್ಲಿ ಹೆಚ್ಚಾಗಿ ಉಪಯೋಗಿಸಲಾಗುತ್ತಿರುವ ಖನಿಜ—ಪ್ರಾಣಿಜ—ವನಸ್ಪತಿಜ ಮೊದಲಾದ ೬೦ ಔಷಧ ದ್ರವ್ಯಗಳ ಸ್ವರೂಪ-ರಸ-ವೀರ್ಯ-ವಿಪಾಕ-ಪ್ರಭಾವ-ಶೋಧನಕ್ರಮ-ಉಪಯೋಗಗಳನ್ನು ಸವಿಸ್ತರವಾಗಿ ವಿವೇಚಿಸಿದ್ದಾರೆ. ಎರಡನೆಯ ಭಾಗದಲ್ಲಿ ಪ್ರಸಿದ್ಧ ರಸೌಷಧಿಗಳು, ಕ್ವಾಥ, ಚೂರ್ಣ, ಗುಟಿ ವಟಿ, ಘೃತ, ತೈಲ ಅವಲೇಹಗಳ ಪಾಠಗಳನ್ನು ಕೊಡಲಾಗಿದೆ.

ವೈದ್ಯಕ ವ್ಯವಸಾಯಿಗಳು ಈ ಗ್ರಂಥವನ್ನು ಅವಶ್ಯವಾಗಿ ಓದಬೇಕು. ಪ್ರಾಚೀನ ಆಯುರ್ವೇದದ ಪರಂಪರೆಯನ್ನನುಸರಿಸಿಯೇ ವಿಷಯವನ್ನು ವಿವೇಚಿಸಲಾಗಿದೆ. ಅಲ್ಲಲ್ಲಿ ಔಷಧ ನಿರ್ಮಾಣದಲ್ಲಿಯ ಸ್ವಾನುಭವಗಳನ್ನೂ ಪರಂಪರಾಗತ ವಿಧಾನಗಳನ್ನೂ ಹೇಳಿರುವುದರಿಂದ ಗ್ರಂಥವು ಹೆಚ್ಚು ಉಪಯುಕ್ತವಾಗಿದೆ.

ಪ್ರಾಸ್ತಾವಿಕವಾಗಿ ರಸವೈದ್ಯಕದ ಅಲ್ಪಪರಿಚಯ, ರಸ-ಉಪರಸ-ಕ್ಷಾರ ಮೊದಲಾದ

—೧೩ನೇ ಪುಟಕ್ಕೆ

# ಘಟನಾ ಸಮಿತಿಯ ಮುಂಬರುವ ಅಧಿವೇಶನ

—ಶ್ರೀ. ರಂ. ರಾ. ದಿವಾಕರರಿಂದ

ಇದೇ ೨೮—೪—೪೭ನೇ ದಿನ ಘಟನಾ ಸಮಿತಿಯ ಪ್ರಾರಂಭಿಕ ಅಧಿವೇಶನದ ಮೂರನೆ ಘಟ್ಟವು ಕೂಡತಕ್ಕದ್ದಿದೆ. ಈಗಿರೆಡು ಘಟ್ಟಗಳಲ್ಲಿ ಏನೇನು ನಡೆಯಿತೆಂಬುದು ಎಲ್ಲರಿಗೂ ಗೊತ್ತೇ ಇದೆ. ನಡೆದು ಹೋದ ಸಂಗತಿಗಳಲ್ಲಿ ಅತ್ಯಂತ ಮಹತ್ವವು ಯಾವೆಂದರೆ, ೧) ಮೂಲಭೂತ ಹಕ್ಕಿನ ವಿಚಾರ, ಅಲ್ಪಸಂಖ್ಯಾಕರ ಹಕ್ಕು ಬಾಧ್ಯತೆಗಳ ವಿಚಾರ, ಟ್ರಾಯಬಲ್ ಏರಿಯಾ ಹಾಗೂ ಎಕ್ಸಕ್ಲೂಡೆಡ್ ಏರಿಯಾಗಳಲ್ಲಿ ಇರುವ ಜನರ ರಾಜ್ಯಕಾರಭಾರ ಹೇಗೆ ಇರಬೇಕು. ಈ ಬಗ್ಗೆ ವಿಚಾರ, ಈ ಮೂಬಗೆಯ ವಿಚಾರ ಮಾಡಲು ಅಡ್ವಾಯಿಜರಿ ಕಮೀಟಿಯ ನೇಮಕ ೨) ಮಧ್ಯವರ್ತಿ ಸರಕಾರದ ಅಧಿಕಾರಗಳೇನಿರಬೇಕೆಂಬ ಬಗ್ಗೆ ಕ್ಯಾಬಿನೆಟ್ ಯೋಜನೆಯವರು ಹಾಕಿಕೊಟ್ಟ ನಾಲ್ಕು ಮಾತುಗಳ ಅಂದರೆ ಸಂರಕ್ಷಣ, ಪರಸ್ಪರ ಸಂಬಂಧ ಸಾಧನ (ಕಮ್ಯುನಿಕೇಶನ್ಸ), ಪರರಾಷ್ಟ್ರ ಸಂಬಂಧ, ಹಾಗೂ ಇವೆಲ್ಲವುಗಳಿಗೆ ಬೇಕಾದ ಹಣದ ವ್ಯವಸ್ಥೆ, ಇವುಗಳ ಸ್ಪಷ್ಟೀಕರಣವನ್ನು ಮಾಡುವದಕ್ಕಾಗಿ ಒಂದು ಮಂಡಳದ ನೇಮಕ ೩) ಘಟನಾ ಸಮಿತಿಯ ಮೂಲೋದ್ದೇಶ ಹಾಗೂ ಧ್ಯೇಯ ಇವುಗಳ ಬಗ್ಗೆ ಘೋಷಣೆ.

ಮೇಲ್ಕಾಣಿಸಿದ ಎರಡು ಕಮೀಟಿಗಳಲ್ಲಿ ಮೊದಲನೆ ಕಮೀಟಿಯ ಚಟುವಟಿಕೆಗಳು ಸಾಕಷ್ಟು ದ್ರುತಗತಿಯಿಂದ ಸಾಗಿವೆ. ಲೀಗಿನವರು ಸಹಕರಿಸದೆ ಹೋದುದರಿಂದ ಎರಡನೇ ಕಮೀಟಿಯು ಇನ್ನೂ ಕಾರ್ಯಕ್ಷಮವಾಗಿಲ್ಲ ಎಂದು ಹೇಳಬಹುದು. ಆದರೆ ಇನ್ನೂ ೨೮ ರ ವರೆಗೆ ೧೦—೧೨ ದಿನಗಳಿವೆ. ಅಷ್ಟರಲ್ಲಿ ಆ ಕಮೀಟಿಯು ತನ್ನ ಕೆಲಸವನ್ನು ಮುಂದರಿಸುವ ಸಂಭವವಿದೆ.

## ವೇಳಾಪತ್ರಿ

ಪ್ರಾರಂಭಿಕವೆನಿಸುವ ಈ ಮುಂದಿನ ಸಭೆಯಲ್ಲಿ ಈ ಕಮೀಟಿಗಳ ವರದಿಗಳಲ್ಲಿ ವಿಚಾರಕ್ಕೆ ಬರಬೇಕು. ಆದರೆ ಹಾಗೆ ಆಗುವ ಲಕ್ಷಣಗಳು ತೋರುವದಿಲ್ಲ. ಲೀಗಿನವರು ಸಹಕರಿಸುವರೊ ಇಲ್ಲವೊ ಎಂಬುದನ್ನು ಮುಂದಿನ ಸಭೆಯ ಹಾಗೂ ಘಟನಾ ಸಮಿತಿಯ ವೇಳಾಪತ್ರಿಕೆಯು ಅವಲಂಬಿಸಿದೆ ಎಂದು ಹೇಳಬಹುದು. ಅವರು ಸಹಕರಿಸಿದರೆ ಒಂದು ರೀತಿ, ಸಹಕರಿಸದಿದ್ದರೆ ಇನ್ನೊಂದು ರೀತಿ ವೇಳಾಪತ್ರಿಕೆಯನ್ನು ಸಿದ್ಧಗೊಳಿಸಬೇಕಾದೀತು. ಸಹಕರಿಸಿದರೆ ಮುಂದೆ 'ಎ' 'ಸೆಕ್ಶನ್' 'ಬಿ' ಸೆಕ್ಶನ್ 'ಸೀ ಸೆಕ್ಶನ್' ಎಂಬ ಗುಂಪು ಮಾಡಿಕೊಂಡು ಪ್ರಾಂತಗಳ ಇಲ್ಲವೆ ಗುಂಪುಗಳ ಘಟನೆಯ ವಿಚಾರವನ್ನು ಮಾಡಬೇಕಾದೀತು. ಇಲ್ಲದೆ ಹೋದರೆ 'ಎ' ಸೆಕ್ಶನ್ ಒಂದೇ ಉಳಿಯುವದು. ಪ್ರಾಂತಿಕ ಘಟನೆಗಳ ವಿಚಾರ ಮಾಡುವಾಗ ಉಳಿದ ಎರಡು ಗುಂಪುಗಳಲ್ಲಿಯ ಲೀಗೇತರ ಸಭಾಸದರು ಏನು ಮಾಡಬೇಕು. ಅವರು 'ಎ' ಸೆಕ್ಶನ್‌ದಲ್ಲಿ ಕೂಡಬೇಕೋ ಹೇಗೆ ಎಂಬ ಮುಂತಾದ ಪ್ರಶ್ನೆಗಳು ನಿರ್ಣಯಿಸಲ್ಪಡಬೇಕಾಗುವವು. ಅದೇ ರೀತಿ ಸಂಸ್ಥಾನಗಳು ಎಷ್ಟು ಕೂಡುವವು ಯಾವಾಗ ಕೂಡುವವು ಇದೂ ಒಂದು ದೊಡ್ಡ ಪ್ರಶ್ನೆ. ನಿಜವಾಗಿ ಅವು ಮೊದಲಿನಿಂದಲೆ ಕೂಡಬೇಕಿತ್ತು. ಮೂಲಭೂತ ಹಕ್ಕು ಮುಂತಾದ ಪ್ರಶ್ನೆ ವಿಚಾರಗಳಲ್ಲಿ ಅವರೂ ಭಾಗವಹಿಸತಕ್ಕದ್ದಿತ್ತು. ಆದರೆ ಕ್ಯಾಬಿನೆಟ್ ಯೋಜನೆಯಲ್ಲಿ ಅವರು ಬಳಿಕ ಕೂಡಬೇಕೆಂದು ಯಾಕೆ ಅಂದರೂ ಅದಕ್ಕೆ ಕಾಂಗ್ರೆಸ್ ಹಾಗು ಲೀಗಿನವರು ಯಾಕೆ ಒಪ್ಪಿಕೊಂಡರೂ ಇದೊಂದು ಗೂಢವೆ ಇದೆ. ಇರಲಿ. ಈಗ ಹಲವು ಸಂಸ್ಥಾನಗಳು ಈಗಲೆ ಕೂಡಬೇಕೆನ್ನುವವು, ಹಲವು ಬಳಿಕ ಕೂಡುವೆನೆನ್ನುವವು, ಹಲವಂತೂ ಕೂಡುವದೆ ಇಲ್ಲ ಎನ್ನುವವು. ಏನೇ ಇರಲಿ ಘಟನಾ ಸಮಿತಿಯು ವೇಳಾಪತ್ರಿಕೆಯನ್ನು ಸಿದ್ಧಪಡಿಸುವಾಗ ಇದೊಂದು ಮಹತ್ವದ ವಿಚಾರವನ್ನು ಲಕ್ಷ್ಯದಲ್ಲಿಡಬೇಕಾಗಿದೆ ಇಷ್ಟೊಂದು ನಿಜ.

## ಲೀಗಿನ ಪ್ರವೇಶ?

ಘಟನಾ ಸಮಿತಿಯಲ್ಲಿ ಲೀಗಿನ ಪ್ರವೇಶವಾಗುವದೊ ಇಲ್ಲವೊ ಎಂಬುದು ಇನ್ನೂ ಕೂಟ ಪ್ರಶ್ನೆಯೇ ಆಗಿದೆ. ಈ ವರೆಗೆ ದಿಲ್ಲಿಯಲ್ಲಿನಡೆದ ಮಾತುಗಳ ಫಲಿತಾಂಶವು ನಕಾರಾರ್ಥವೆ ಇದೆ ಎಂದು ಹೇಳಲು ಅಡ್ಡಿ ಇಲ್ಲ. ಲೀಗು ಬರದಿದ್ದರೂ ಕಾಂಗ್ರೆಸ್ಸು ಹಾಗೂ ಇತರ ಪಕ್ಷದವರೆಲ್ಲ ಘಟನಾ ಸಮಿತಿಯನ್ನು ಮುಂದರಿಸುವ ನಿರ್ಧಾರವನ್ನಂತೂ ಮಾಡಿರುವರು. ಸಂಸ್ಥಾನಗಳಲ್ಲಿ ಎಷ್ಟು ಬರುವವೂ ಅಷ್ಟೊಂದನ್ನು ಕಟ್ಟಿಕೊಂಡು ಮುಂದೆ ಸಾಗುವರು. ಸಂಸ್ಥಾನಗಳು ಸಾಕಷ್ಟು ಬರಲು ಸ್ವಲ್ಪ ಅನುಕೂಲವಾಗಲು ಕೆಲವೊಂದು ಕಾಲವನ್ನು ಕೊಡಬಹುದು. ಆದರೆ ಲೀಗ ಬರದೆ ಹೋದರೆ ಮುಂದೆ ಈ ಘಟನಾ ಸಮಿತಿಯು ನಿರ್ಣಯಗಳ ಅಮಲು ಯಾರ ಯಾರ ಮೇಲೆ ಆಗುವದು ಇದೊಂದು ದೊಡ್ಡ ಪ್ರಶ್ನೆ ಇದೆ. ಬ್ರಿಟಿಶರಂತೂ ಜೂನ ೧೯೪೮ ರಲ್ಲಿ ಹೊರಟು ಹೋಗುವರು. ಅಂದಬಳಿಕ ಈ ಘಟನಾ ಸಮಿತಿಯ ನಿರ್ಣಯಗಳನ್ನು ಯಾವ ಯಾವ ಪ್ರಾಂತಗಳು ಹಾಗೂ ಯಾವ ಯಾವ ಪ್ರಾಂತ ಭಾಗಗಳು ಮತ್ತು ಸಂಸ್ಥಾನಗಳು ಒಪ್ಪುವವೊ ಅವುಗಳಿಗೆ ಬಂಧನಕಾರಕ ಎಂದು ಸಾರಿಬಿಟ್ಟರೆ ಸುಸೂತ್ರವಾಗುವದು. ಹಿಂದುಸ್ಥಾನದಲ್ಲಿಯ ಹೀಗೆ ಒಪ್ಪುವ ಭಾಗಗಳನ್ನು ಬಿಟ್ಟು ಉಳಿದವುಗಳನ್ನು ಏನು ಮಾಡಬೇಕು ಎಂಬುವ ಪ್ರಶ್ನೆಯನ್ನು ಬಿಡಿಸುವದೂ ಸುಲಭವಲ್ಲ. ಅವೆಲ್ಲ ಕೂಡಿ ಒಂದು ಬೇರೆ ಘಟನೆ ಮಾಡಿಕೊಳ್ಳುತ್ತೇವೆಂದು ಒಪ್ಪಿದರೆ ಮಾತು ಬೇರೆ. ಆದರೆ ಈಗ ಸಿಂಧದವರು ಅನ್ನುತ್ತಿರುವರಂತೆ ತಾವು ಒಂದು ಪ್ರಾಂತದವರು ಸ್ವತಂತ್ರರಾಗುವ ದೃಷ್ಟಿಯಿಂದ ತಮ್ಮ ಘಟನೆ ಮಾಡಿಕೊಳ್ಳುವವರಾದರೆ ಸಿಂಧ, ಪಂಜಾಬದ ಪೂರ್ವಭಾಗ, ಬಂಗಾಲದ ಪೂರ್ವಭಾಗ ಇವು ಪ್ರತ್ಯೇಕ ಸ್ವತಂತ್ರ ಪ್ರಾಂತಗಳಾಗಬೇಕಾದೀತು. ಹಾಗೂ ಅವು ತಮ್ಮ ತಮ್ಮ ಘಟನೆಗಳನ್ನು ಮಾಡಿಕೊಳ್ಳಬೇಕಾದೀತು; ಆಗ ಘಟನಾ ಸಮಿತಿಯವರು ನಿರ್ಮಿಸುವ ಸರಕಾರದೊಡನೆ ಯಾವ ರೀತಿ ತಮ್ಮ ಸಂಬಂಧವನ್ನಿಟ್ಟುಕೊಳ್ಳಬೇಕು ಎಂಬುದು ಮತ್ತೊಂದು ಪ್ರಶ್ನೆ ಉದ್ಭವಿಸುವದು. ಲೀಗಿನವರು ಘಟನಾ ಸಮಿತಿಯಲ್ಲಿ ಭಾಗ ವಹಿಸದೆ ಹೋದರೆ ಇವೆಲ್ಲ ನಾನಾ ಪ್ರಶ್ನೆಗಳು ಉಂಟಾಗುವವು. ಅವುಗಳನ್ನು ಈಗಿಯೆ ಬಿಡಿಸಬೇಕಾಗುವದು.

## ನಾಳಿನ ಅಧಿವೇಶನ

ಈ ಎಲ್ಲ ತೊಡಕುಗಳನ್ನು ನೋಡಿದರೆ ೨೮ಕ್ಕೆ ಕೂಡಲಿರುವ ಪ್ರಾರಂಭಿಕ (ಪ್ರಿಲಿಮಿನರಿ) ಅಧಿವೇಶನದಲ್ಲಿ ಹೆಚ್ಚು ಕೆಲಸವೇನೂ ಆದೀತೆಂದು ತೋರುವದಿಲ್ಲ. ಲೀಗು ಭಾಗವಹಿಸುವದೊ ಇಲ್ಲವೊ ಎಂಬುದೂ ಅಲ್ಲಿಯವರೆಗೆ ನಿರ್ಣಯಿಸಲ್ಪಡುವ ಲಕ್ಷಣವೂ ಇಲ್ಲ. ಅಂದಬಳಿಕ ೪-೬ ದಿನ ಕೂಡಿ ಹಲವು ಔಪಚಾರಿಕ ಪ್ರಶ್ನೆಗಳ ನಿಕಾಲೆ ಮಾಡಿ ಪುನಃ ಲೀಗಿನ ಪ್ರವೇಶಕ್ಕಾಗಿ ಹಾಗೂ ಇನ್ನೂ ಹೆಚ್ಚು ಸಂಸ್ಥಾನಗಳು ಬರಬೇಕೆಂಬ ಉದ್ದೇಶದಿಂದ ಆ ಅಧಿವೇಶನವು ಒಂದು ತಿಂಗಳೊಪ್ಪತ್ತು ಮುಂದರಿದರೆ ಆಶ್ಚರ್ಯವಲ್ಲ.

## ಭಾಷಾನುಗುಣ ಪ್ರಾಂತ

ಈ ಪ್ರಶ್ನೆ ಮಾತ್ರ ಈ ಅಧಿವೇಶನದಲ್ಲಿ ಬರಬೇಕಿರದೆಂದು ಈ ಮೊದಲೇ ಗೊತ್ತಾಗಿದೆ. ಅದರಂತೆ ಅದು ಬರಬಹುದೆಂಬ ಭರವಸೆ ಇದೆ. ಅದಕ್ಕೆ ತಾತ್ವಿಕ ವಿರೋಧವಂತೂ ಯಾರದೂ ಇಲ್ಲ. ಅಂದಬಳಿಕ ಅದು ಸುಸೂತ್ರವಾಗುವ ಲಕ್ಷಣಗಳು ಸ್ಪಷ್ಟವಿರುವವು.

# ಸಂಪಾದಕೀಯ ಟೀಕೆಟಿಪ್ಪಣಿಗಳು

## ಆಹಾರ ಮಂತ್ರಿಗಳ ಆಶ್ವಾಸನ

ನಡುಗಾಲ ಸರಕಾರ ಮಂತ್ರಿಗಳಾದ ಡಾ. ರಾಜೇಂದ್ರ ಪ್ರಸಾದರು, 'ನಾನು ಆಹಾರ ಮಂತ್ರಿಯಾಗಿರುವ ವರೆಗೆ ಮುಂಬಯಿ ಪ್ರಾಂತಕ್ಕೆ ಶಕ್ಯವಿದ್ದ ಸಹಾಯ ಸಲ್ಲಿಸುವುದಾಗಿ ಮುಂಬಯಿ ಸಭೆಯಲ್ಲಿ ಆಶ್ವಾಸನ ಕೊಟ್ಟಿರುವರು. ಈ ಆಶ್ವಾಸನದಿಂದ ಪ್ರಾಂತದಲ್ಲಿ ಆಹಾರ ಪದಾರ್ಥಗಳ ಬಗ್ಗೆ ಇದ್ದ ವಿವಂಚನೆ ಬಹಳ ಮಟ್ಟಿಗೆ ಕಡಿಮೆಯಾಯಿತೆಂದು ಹೇಳಬಹುದು. ಉತ್ತರ ಹಿಂದುಸ್ತಾನದಲ್ಲಿ ಗೋದಿ ಬೆಳೆ ಚೆನ್ನಾಗಿ ಬಂದಿದೆ. ಬ್ರಹ್ಮದೇಶದಿಂದಲೂ ಅಕ್ಕಿ ಬರುವ ಸಂಭವವುಂಟು. ಅದುದರಿಂದ ಎಂಥ ಭೀಕರ ಬರಗಾಲವನ್ನೂ ನಿಯಂತ್ರಿಸುವುದಾಗಿ ಸಾರಿರುವರು. ನಡುಗಾಲ ಸರಕಾರದ ಮಂತ್ರಿಗಳ ಆಶ್ವಾಸನವನ್ನು ಕಾರ್ಯರೂಪದಲ್ಲಿ ತರಲು ಮುಂಬಯಿ ಸರಕಾರದವರು ವಿಶೇಷ ಪ್ರಯತ್ನ ಮಾಡಬೇಕಾದುದು ಅವಶ್ಯವೆನಿಸುತ್ತದೆ. ಪ್ರಾಂತದ ಯಾವ ಭಾಗಗಳಲ್ಲಿ ಯಾವಾವ ಪದಾರ್ಥಗಳು ಬೇಕೆಂಬದನ್ನು ಕಂಡು ಹಿಡಿದು ಅಷ್ಟು ಆಹಾರ ಪದಾರ್ಥಗಳನ್ನು ನಡುಗಾಲ ಸರಕಾರದ ಸಹಾಯದಿಂದ ಪಡೆಯುವುದು ಮುಂಬಯಿ ಸರಕಾರದ ಕರ್ತವ್ಯವಾಗಿದೆ. ಪ್ರಾಂತಿಕ ಸರಕಾರದ ಪರಿಸ್ಥಿತಿಯನ್ನು ನೋಡಿದರೆ ಸರಕಾರದವರು ಆಹಾರ ಪೂರೈಕೆಯಲ್ಲಿ ಅಷ್ಟೊಂದು ಯಶಸ್ವಿಯಾಗಿಲ್ಲೆಂದು ವಿಷಾದದಿಂದ ಹೇಳಬೇಕಾಗುತ್ತದೆ. ಈ ಲೋಪದೋಷಗಳನ್ನು ಹೋಗಲಾಡಿಸಿಕೊಂಡು ಮುಂಬಯಿ ಸರಕಾರದವರು ಕೇಂದ್ರ ಸರಕಾರದವರ ಸಹಾಯದಿಂದ ಅವಶ್ಯಕ ಆಹಾರ ಪದಾರ್ಥಗಳನ್ನು ಸಕಾಲದಲ್ಲಿಯೇ ತರಿಸಿಕೊಂಡು ಯೋಗ್ಯ ರೀತಿಯಿಂದ ಅದರ ಹಂಚಿಕೆ ಮಾಡಿ ಜನರ ಕೊರತೆಯನ್ನು ಹೋಗಲಾಡಿಸಬೇಕಾಗಿ ಸೂಚನೆ.

## ಪಾಕಿಸ್ತಾನ ಸಮಸ್ಯೆ ಬಿಡುವದೆಂತು?

ಮುಸ್ಲಿಂ ಲೀಗಿನ ಧುರೀಣರಾದ ಬ್ಯಾ. ಜಿನ್ನಾ ಸಾಹೇಬರು ಮತ್ತು ಅವರ ಪ್ರಮುಖ ಅನುಯಾಯಿಗಳು ಪಾಕಿಸ್ತಾನದ ತಮ್ಮ ದುರಾಗ್ರಹವನ್ನು ಬಿಡುವಂತೆ ತೋರುವದಿಲ್ಲ! ಬರಿ ಮಾತಿನಿಂದ ಪ್ರಯತ್ನಿಸಿದರೆ ಅದು ಸಾಧ್ಯವಾಗಲಾರದೆಂದು ಬಗೆದೊ ಏನೊ ಇದೀಗ ಹಿಂಸಾಕೃತ್ಯಗಳಿಗೆಳಸಿರುವರು. ಸರಹದ್ದ, ಪಂಜಾಬ, ಬಂಗಾಲ ಮುಂಬಯಿಗಳಲ್ಲಿ ಇರಿತ ಕೊಳ್ಳಿ, ಕೊಲೆ ಸುಲಿಗೆಗಳನ್ನು ನಡೆಸಿ ಜನತೆಯಲ್ಲಿ ಮತ್ತು ಸರಕಾರದಲ್ಲಿ ಒಂದು ಬಗೆಯ ಅಂಜಿಕೆಯನ್ನು ಹುಟ್ಟಿಸಿ ಪಾಕಿಸ್ತಾನವನ್ನು ಪಡೆಯಬೇಕೆಂದು ಅವರು ಬಗೆದಿರುವಂತೆ ತೋರುವುದು. ಇವುಗಳ ಪ್ರತೀಕಾರವೆಂದು ಅಲ್ಲಿಯ ಸರಕಾರಗಳಾಗಲಿ ಇಲ್ಲವೆ ಜನರಾಗಲಿ ಅಷ್ಟೊಂದು ಉಗ್ರ ಉಪಾಯಗಳನ್ನು ಇನ್ನೂ ಕೈಕೊಂಡಿಲ್ಲೆಂದೂ ಹೇಳಬಹುದು. ಪುಂಡರನ್ನು ದಂಡಿಸುವ ಸಾಧನಗಳನ್ನೇನೊ ಸರಕಾರದವರು ಸಿದ್ಧಪಡಿಸಿಕೊಂಡಿರುವರು. ಆದರೆ ಅವುಗಳ ಉಪಯೋಗವನ್ನು ಇನ್ನೂ ಸಾಕಷ್ಟು ಮಾಡಿರುವದಿಲ್ಲ. ಅಲ್ಲಲ್ಲಿನ ಜನರು ಕೆಲ ಸಂದರ್ಭಗಳಲ್ಲಿ ಲೀಗಿನ ಚಟುವಟಿಕೆಗಳಿಗೆ ಪ್ರತ್ಯುತ್ತರ ಕೊಡುತಿದ್ದರೂ ಲೀಗಿನವರು ಸಂಘಟಿತವಾಗಿ ಎಸಗುತಿರುವ ದುರ್ಘಟನೆಗಳಿಗೆ ಸಂಘಟಿತ ಪ್ರತೀಕಾರವಿಲ್ಲೆಂದು ಹೇಳಬಹುದಾಗಿದೆ. ಪಾಕಿಸ್ತಾನ ಸಮಸ್ಯೆ ಇಂಥ ಹೀನ ಮತ್ತು ಅಮಾನುಷ ಕೃತ್ಯಗಳಿಂದ ಎಂದಿಗೂ ಬಗೆಹರಿಯದು. ಪರಸ್ಪರರ ಸಮ್ಮತಿಯಿಂದ ಇಲ್ಲವೆ ಯುದ್ಧದಿಂದ ಈ ಸಮಸ್ಯೆಯು ಪರಿಹಾರವಾಗಬಲ್ಲುದೆಂದು ಪಂಡಿತ ಜವಾಹರಲಾಲರು ಜಾಲಿಯನ್‌ವಾಲಾಬಾಗ ದಿನಾಚರಣೆಯ ನಿಮಿತ್ತ ದಿಲ್ಲಿಯಲ್ಲಿ ಕೂಡಿದ ಸಭೆಯಲ್ಲಿ ಹೇಳಿದ್ದು ಉಚಿತವೆನಿಸುತ್ತದೆ. ಭಾರತ ಸ್ವತಂತ್ರವಾಗಬೇಕೆಂದು ಕಾಂಗ್ರೆಸ್ಸಿನ ಹಾರಯಿಕೆ. ಪಾಕಿಸ್ತಾನ ಬೇಡಿಕೆಯು ನೇತಿ ನೇತಿ ಎಂಬ ಬೇಡಿಕೆಯಾಗಿದೆ. ನಾವೆಷ್ಟು ಸಲ ಅದರ ವ್ಯಾಖ್ಯೆಯನ್ನು ಕೇಳಿದರೂ ಲೀಗನವರು ಅದನ್ನು ವಿವರಿಸಿಲ್ಲ. ಸಂಗತಿ ಸಂದರ್ಭಗಳನ್ನು ಸ್ಪಷ್ಟಪಡಿಸದಿದ್ದರೆ ಗೊಂದಲಗಳೇಳುವದು ಸ್ವಾಭಾವಿಕ ಎಂದು ಮುಂತಾಗಿಯು ಪಂಡಿತ ಜವಾಹರಲಾಲರು ಅಭಿಪ್ರಾಯ ಪಟ್ಟಿದ್ದಾರೆ. ಭಾರತದಲ್ಲಿ ರಕ್ತದ ಕಾಲುವೆ ಹರಿಸಬೇಕಾಗಿದ್ದರೆ ಯುದ್ಧದಿಂದ ಪಾಕಿಸ್ತಾನ ಸಮಸ್ಯೆ ಬಗೆಹರಿಸಿಕೊಳ್ಳಬಹುದು, ಇಲ್ಲವಾದರೆ ಪರಸ್ಪರ ವಿಚಾರ ವಿನಿಮಯದಿಂದ ಕೊಡತಕ್ಕೊಳ್ಳುವ ವೃತ್ತಿಯಿಂದ ಇದನ್ನು ನಿರ್ಣಯಿಸಿಕೊಳ್ಳಬಹುದು. ಪರಕೀಯರ ಬಲದ ಬೆಂಬಲದದಿಂದ ಇಲ್ಲವೆ ಪಾಶವೀ ಹೀನಕೃತ್ಯಗಳಿಂದು ಅಂದೆದಿಗೂ ಸಾಧ್ಯವಾಗದೆಂದು ಲೀಗಿನವರು ಬೇಗ ತಿಳಿದಷ್ಟು ಅವರಿಗೂ ದೇಶಕ್ಕೂ ಹಿತಕರ.

## ಉಭಯ ಸಂಕಟ

ಪಾಕಿಸ್ತಾನ ಸಮಸ್ಯೆಯಲ್ಲಿ ಬ್ಯಾ. ಜಿನ್ನಾ ಸಾಹೇಬರು ಧರ್ಮ ಸಂಕಟದಲ್ಲಿ ಬಿದ್ದಿರುವರೆಂದು ಹೇಳಬೇಕಾಗುತ್ತದೆ. ಮುಸ್ಲಿಂ ಬಹುಸಂಖ್ಯಾಕ ಸರಹದ್ದ, ಪಂಜಾಬ, ಸಿಂಧ, ಬಂಗಾಲ, ಆಸಾಮ ಪ್ರಾಂತಗಳಲ್ಲಿ ಪಾಕಿಸ್ತಾನಬೇಕೆಂದು ಅವರ ಬೇಡಿಕೆ. ಬಹುಸಂಖ್ಯಾಕರ ಬೇಡಿಕೆಯನ್ನು ನಿರಾಕರಿಸ ಕೂಡದು. ಅಲ್ಲಿನ ಅಲ್ಪಸಂಖ್ಯಾಕರಿಗೆ ಬೇಕಾದ ಸಂರಕ್ಷಣ ಕೊಡಲಾಗುತ್ತದೆಂದು ಮುಂತಾಗಿಯೂ ಅವರ ಆಶ್ವಾಸನ. ಆದರೆ ಈ ಬಹುಸಂಖ್ಯಾಕರ ಬೇಡಿಕೆಯ ತತ್ವವನ್ನು ಬೇರೆ ಕಡೆಗೂ ಅನ್ವಯಿಸಲು ಅವರು ಸಿದ್ಧವಿಲ್ಲ. ಪಂಜಾಬಿನಲ್ಲಿಯ ಹಿಂದೂ ಸೀಖ ಬಹುಸಂಖ್ಯಾಕರಿದ್ದ ಪ್ರಾಂತ ಮತ್ತು ಬಂಗಾಲದಲ್ಲಿಯ ಹಿಂದು ಬಹುಸಂಖ್ಯಾಕ ಭಾಗವನ್ನು ಮುಸಲ್ಮಾನ ಬಹುಸಂಖ್ಯಾಕ ಭಾಗಗಳಿಂದ ಪ್ರತ್ಯೇಕಿಸಬೇಕೆಂದು ಬೇಡಿದರೆ ಜಿನ್ನಾ ಸಾಹೇಬರಿಗೆ ಬರ್ಷಣ. ಅದು ಸಾಧ್ಯವಿಲ್ಲೆಂದು ಅವರ ಹೇಳಿಕೆ. ತಾವು ಪ್ರತಿಪಾದಿಸುತಿರುವ ತತ್ವವನ್ನೆ ಎಲ್ಲ ಸಂದರ್ಭಗಳಲ್ಲಿಯೂ ಅನುಸರಿಸಲು ಜಿನ್ನಾರು ಒಪ್ಪರು. ತಾವು ಎಬ್ಬಿಸಿದ ಈ ಪಾಕಿಸ್ತಾನ ಭೂತವನ್ನು ತಾವೇ ಎದುರಿಸುವ ಪ್ರಸಂಗ ಈಗ ಅವರಿಗೆ ಬಂದಿದೆ. ಮೌಂಟಬ್ಯಾಟನ್‌ರೂ ಹಾಗೆ ಸ್ಪಷ್ಟ ಹೇಳಿ ಬಿಟ್ಟಿರುವರೆಂದು ಸುದ್ದಿ. ಹೀಗಾಗಿ ಜಿನ್ನಾರವರು ಧರ್ಮ ಸಂಕಟದಲ್ಲಿ ಬಿದ್ದಂತಾಗಿದೆ. ಕಾಂಗ್ರೆಸ್ಸು ಎಂದಿನಂತೆ ಈ ಸಮಸ್ಯೆಯ ವಿಚಾರಕ್ಕಾಗಿ ಲೀಗಿನೊಡನೆ ಸಹಕರಿಸಲು ಸಿದ್ಧವಿದೆ. ಬ್ಯಾ. ಜಿನ್ನಾರಿಗೆ ಪಾಕಿಸ್ತಾನ ಬೇಕಾಗಿದ್ದರೆ ಅವರು ಬಂಗಾಲ ಪಂಜಾಬಗಳ ಬೇಡಿಕೆಯನ್ನು ಅಲಕ್ಷಿಸಲಾರರು. ಕಾಂಗ್ರೆಸ್ಸಿನವರು ಇತರ ಹಿಂದೂ ಮತ್ತು ಶೀಖರ ಈ ಬೇಡಿಕೆಗೆ ವೈಸರಾಯರೂ ಒಪ್ಪಿರುವರೆಂದು ಸುದ್ದಿ. ಅದೇನೇ ಇದ್ದರೂ ಬ್ಯಾ. ಜಿನ್ನಾ ಸಾಹೇಬರು ಒಂದು ಕಣ್ಣಿಗೆ ಬೆಣ್ಣೆ ಮತ್ತೊಂದು ಕಣ್ಣಿಗೆ ಸುಣ್ಣ ಈ ಧೋರಣವನ್ನು ಸ್ವೀಕರಿಸಲಾರರು. ಬಹುಸಂಖ್ಯಾಕರ ತತ್ವವನ್ನನುಸರಿಸಿ ಪಂಜಾಬ ಮತ್ತು ಬಂಗಾಲಗಳ ಬೇಡಿಕೆಯನ್ನೂ ಅವರು ಒಪ್ಪಲೇಬೇಕಾಗುವುದು. ಬರಿ ಹಟಮಾರಿತನದಿಂದ ಇಲ್ಲವೆ ಪಾಶವೀಕೃತ್ಯಗಳಿಂದ ಉದ್ದಿಷ್ಟ ಸಾಧಿಸದು.

## ಆಶ್ವಾಸನ ಸಾಕು ಕೃತಿ ಬೇಕು

ಮುಸ್ಲಿಂ ಲೀಗಿನ ಧುರೀಣರು ಅಲ್ಪ ಸಂಖ್ಯಾಕರ ಹಕ್ಕು ಬಾಧ್ಯತೆಗಳನ್ನು ರಕ್ಷಿಸುವುದಾಗಿ ಬಾಯಿಂದ ಹೇಳುತಿರುವರು. ಆದರೆ ಅವರ ಕೃತಿಗಳನ್ನು ನೋಡಿದರೆ ಯಾರೂ ಈ ಆಶ್ವಾಸನದಲ್ಲಿ ವಿಶ್ವಾಸವಿಡುವಂತಿಲ್ಲೆಂದು ಹೇಳಬೇಕಾಗುತ್ತದೆ. ಬಂಗಾಲದ ನವಖಾಲಿ ಮೊದಲಾದ ಕಡೆ ಮತ್ತು ಪಂಜಾಬದಲ್ಲಿ ನಡೆದ ಘಟನೆಗಳನ್ನು ನೋಡಿದರೆ ಈ ಮಾತು ಸ್ಪಷ್ಟವಾಗುವುದು. ಮಹಾತ್ಮಾ ಗಾಂಧಿಯಂಥ ಶಾಂತಿಪ್ರಿಯರು ನವಖಾಲಿಯವರೆಗೆ ಹೋಗಿ ಎಷ್ಟೊಂದು ಪ್ರಯತ್ನಿಸಿದರೂ ಅಲ್ಪಸಂಖ್ಯಾಕರ ಹಕ್ಕು ಬಾಧ್ಯತೆಗಳು ರಕ್ಷಿತವಾಗಲಿಲ್ಲ. ಇಷ್ಟೇ ಅಲ್ಲ ವಿವಂಚನೆಗೆ ಅವಕಾಶ ಕೊಡುವ ಕೃತ್ಯಗಳು ಈಗಲೂ ಅಲ್ಲಿ ನಡೆಯುತಿವೆ. ಅಂತೆಯೇ ಅವರು ಹತಾಶರಾಗಿ ಅಲ್ಲಿನ ಹಿಂದುಗಳು ಸ್ಥಾನಾಂತರ ಮಾಡಬೇಕೆಂದು ಬೋಧಿಸಿದ್ದಾರೆ. ಯಾವ ಪರಿಸ್ಥಿತಿಯಲ್ಲಿಯೂ ಸ್ಥಾನಾಂತರ ಉಚಿತವಲ್ಲೆಂದು ಪ್ರತಿಪಾದಿಸುತ್ತಿದ್ದ ಗಾಂಧೀಜಿಯವರು ಈಗ ಅದನ್ನು ಬೋಧಿಸಹತ್ತಿರುವರೆಂಬುದನ್ನು ಗಮನಿಸಿದರೆ ಅಲ್ಲಿನ ಬಹುಸಂಖ್ಯಾಕ ಮುಸಲ್ಮಾನರ ಆಶ್ವಾಸನ ಕೇವಲ ಜೊಳ್ಳು ಪೊಳ್ಳುದಾದೆಂಬುದು ಸ್ಪಷ್ಟವಾಗುವದು. ಸತೀಶಚಂದ್ರ ದಾಸಗುಪ್ತರೂ ಇದೇ ಬಗೆಯ ಅಭಿಪ್ರಾಯ ಪಟ್ಟಿದ್ದಾರೆ. ಬಂಗಾಲದ ಮುಖ್ಯ ಮಂತ್ರಿಗಳಾದ ಸುಹ್ರವರ್ದಿ ಸಾಹೇಬರು ಮಹಾತ್ಮರ ಮತ್ತು ದಾಸಗುಪ್ತರ ಈ ಅಭಿಪ್ರಾಯವನ್ನು ಆಕ್ಷೇಪಿಸಿ ಸತ್ಯಾಂಶಗಳನ್ನು ಚೆನ್ನಾಗಿ ತಿಳಿದುಕೊಳ್ಳದೆ ಭಯಗ್ರಸ್ತ ಪರಿಸ್ಥಿತಿಯಲ್ಲಿ ಈ ಬಗೆಯ ಅಭಿಪ್ರಾಯಕ್ಕೆ ಅವರು ಬಂದಿರುವರೆಂದು ಪ್ರಕಟನೆ ಹೊರಡಿಸಿದ್ದಾರೆ. ವಸ್ತುಸ್ಥಿತಿಯನ್ನು ಬಲ್ಲವರಿಗೆ ಮತ್ತು ಅಲ್ಲಿಯ ಘಟನೆಗಳ ವರದಿಗಳನ್ನು ದಿನಾಲು ಓದುವವರಿಗೆ ಸುಹ್ರವರ್ದಿಯವರ ಈ ಪ್ರಕಟನೆ ಕೇವಲ ಕಣ್ಣುಮುಸಕೆಂದು ಗೊತ್ತಾಗದಿರದು. ಹಿಂದೂ ಅಲ್ಪಸಂಖ್ಯಾಕರನ್ನು ರಕ್ಷಿಸುವದು ತಮ್ಮ ಕರ್ತವ್ಯವೆಂದು ಬರಿ ಬಾಯಿಂದ ಹೇಳಿದರೆ ಯಾವ ಪ್ರಯೋಜನವಿಲ್ಲ. ಸುಹ್ರವರ್ದಿಯಂಥವರು ಕೃತಿಯಿಂದಲೂ ಈ ಕರ್ತವ್ಯವನ್ನು ಮಾಡಿದ್ದರೆ ನವಖಾಲಿಯಂಥ ಹತ್ಯಾಕಾಂಡ ಸಂಭವಿಸುತಿರಲೇ ಇಲ್ಲ. ಈಗಲಾದರೂ ತಮ್ಮ ಕೃತ್ಯಗಳಿಂದ ಅಲ್ಪಸಂಖ್ಯಾಕರ ಹಕ್ಕುಬಾಧ್ಯತೆಗಳನ್ನು ರಕ್ಷಿಸಲಣಿಯಾಗಿ ಬಹುಸಂಖ್ಯಾಕ ಅಲ್ಪಸಂಖ್ಯಾಕ ಸಮಸ್ಯೆಯನ್ನು ಬಿಡಿಸಬೇಕೆಂದು ಅಗ್ರಹಪಡಿಸುತ್ತೇವೆ.

## ಸೂಕ್ತ ಸಲಹೆ

ಹಿಂದುಸ್ತಾನದ ರಾಜಕೀಯ ಸಮಸ್ಯೆಯನ್ನು ಬಿಡಿಸುವುದಕ್ಕಾಗಿ ವೈಸರಾಯ ಲಾರ್ಡ ಮೌಂಟಬ್ಯಾಟನ್ನರು ಪ್ರಯತ್ನ ನಡೆಸಿರುವರು. ಮಹಾತ್ಮಾ ಗಾಂಧಿಯವರನ್ನೊಳಗೊಂಡ ಹಿಂದೀ ಧುರೀಣರನ್ನು ಭೆಟ್ಟಿಯಾಗಿ ಅವರ ವಿಚಾರಗಳನ್ನು ತಿಳಿದುಕೊಳ್ಳಹತ್ತಿರುವರು. ಗಾಂಧೀಜಿಯವರು ಬಿಹಾರಕ್ಕೆ ಹೊರಡುವ ಮೊದಲು ಮತ್ತೊಮ್ಮೆ ವೈಸರಾಯರನ್ನು ಕಂಡು ತಮ್ಮ ಅಭಿಪ್ರಾಯವನ್ನೂ ನಿರ್ಧಾರವನ್ನೂ ತಿಳಿಸಿರುವರೆಂದು ಹೇಳಲಾಗುತ್ತದೆ. ಕಾಲ ವಿಲಂಬಕ್ಕೆ ಅವಕಾಶ ಕೊಡದೆ ಬೇಗನೆ ಯಾವುದೊಂದು ಧೋರಣವನ್ನು ವಹಿಸಿ ಕಾರ್ಯ ಮಾಡಬೇಕೆಂದು ಗಾಂಧೀಜಿಯವರು ಸೂಚಿಸಿರುವರೆಂದು ತಿಳಿಯುತ್ತದೆ. ಬ್ಯಾ. ಜಿನ್ನಾರವರಿಗೆ ಕಾಂಗ್ರೆಸಿನೊಡನೆ ನಡೆಸುವ ಮಾತುಕತೆಗಳಿಂದ ಪಾಕಿಸ್ತಾನದ ಬೇಡಿಕೆ ಸಾಧ್ಯವಾಗದೆಂದು ಎನಿಸಹತ್ತಿದ್ದರಿಂದ ೧೯೪೮ ಜೂನ ನಂತರವೂ ಬ್ರಿಟಿಶರು ಇಲ್ಲಿರಬೇಕೆಂದು ಅವರು ಅಭಿಪ್ರಾಯಪಡುವಂತೆ ತೋರುವುದು. ದುಂಡುಮೇಜಿನ ಪರಿಷತ್ತಿನ ಕಾಂಗ್ರೆಸ್ಸಿನ ಆಮಂತ್ರಣವನ್ನೂ ಮತ್ತು ಪಾಕಿಸ್ತಾನದ ಪ್ರಶ್ನೆಯನ್ನು ಅಂತರ್‌ರಾಷ್ಟ್ರೀಯ ನಿಷ್ಪಕ್ಷಪಾತ ವಿಚಾರಣಾ ಮಂಡಳಕ್ಕೆ ನೇಮಿಸಬೇಕೆಂಬ ಮಹಾತ್ಮರ ಸೂಚನೆಯನ್ನು ನಿರಾಕರಿಸಿರುವರೆಂದೂ ತಿಳಿಯುತ್ತದೆ. ಪಾಕಿಸ್ತಾನ ಮುಸಲ್ಮಾನರ ಜನ್ಮಸಿದ್ಧ ಹಕ್ಕು. ಅದನ್ನು ನಿರ್ಣಯಿಸುವ ಅಧಿಕಾರ ಬೇರೆ ಯಾರಿಗೂ ಇಲ್ಲ. ವಾಯವ್ಯ ಹಾಗು ಈಶಾನ್ಯ ಭಾಗಗಳಲ್ಲಿಯ ಗಡಿಗಳನ್ನು ನಿರ್ಧರಿಸುವದಕ್ಕೆ ಮಾತ್ರ ಅಂತರ್‌ರಾಷ್ಟ್ರೀಯ ಮಂಡಳ ನೇಮಿಸಬಹುದೆಂದು ಜಿನ್ನಾರವರು ವೈಸರಾಯರಿಗೆ ತಿಳಿಸಿರುವರಂತೆ. ನಡುಗಾಲ ಸರಕಾರದಿಂದ ಹೊರಬೀಳುವ ಪ್ರಸಂಗ ಬಂದರೂ ಘಟನಾ ಸಮಿತಿಯಲ್ಲಿ ಜಿನ್ನಾರು ಸೇರುವದಿಲ್ಲವಂತೆ. ಇದನ್ನೆಲ್ಲ ನೋಡಿದರೆ ಕಾಂಗ್ರೆಸ್ಸು ಮತ್ತು ಜಿನ್ನಾರವರಲ್ಲಿ ಒಪ್ಪಂದವಾಗುವದು ಶಕ್ಯವಿಲ್ಲೆಂದು ತೋರುತ್ತದೆ. ಈ ಪರಿಸ್ಥಿತಿಯಲ್ಲಿ ಮಹಾತ್ಮರು ಸೂಚಿಸಿದಂತೆ ಅಧಿಕಾರವನ್ನು ಕಾಂಗ್ರೆಸ್ಸಿಗೆ ಇಲ್ಲವೆ ಲೀಗಿಗೆ ಒಪ್ಪಿಸಿ ಬ್ರಿಟಿಶರು ಇಲ್ಲಿಂದ ಕಾಲ್ತೆಗೆಯುವುದುಚಿತವೆಂದು ತೋರುತ್ತದೆ. ಅಂದರೆ ಪರಕೀಯರ ಕೈವಾಡವಿಲ್ಲದೆ ಭಾರತೀಯರು ತಮ್ಮ ಭವಿತವ್ಯದ ಇತ್ಯರ್ಥ ಮಾಡಿಕೊಳ್ಳಬಲ್ಲರು. ಹೀಗೆ ಮಾಡುವಾಗ ಕೆಲಕಾಲ ಅರಾಜಕತೆಯೂ ಉಂಟಾಗಬಹುದು. ಆದರೆ ಅದು ಸಂಧಿಕಾಲದಲ್ಲಿ ಅನಿವಾರ್ಯವೆಂದು ಹೇಳಬಹುದು. ವೈಸರಾಯರು ಯಾವ ಕ್ರಮವನ್ನನುಸರಿಸುವರೋ ನೋಡಬೇಕಾಗಿದೆ.

## ಸಂಧಿಕಾಲದಲ್ಲಿಯ ಧೋರಣೆ

ಕಾಂಗ್ರೆಸ್ಸು ಈ ಸಂಧಿಕಾಲದಲ್ಲಿ ತನ್ನ ಧೋರಣೆಯನ್ನು ಮಾರ್ಪಡಿಸಿಕೊಳ್ಳಲಿದೆಂದು ಹೇಳಲಾಗುತಿದೆ. ನಡುಗಾಲ ಸರಕಾರ, ಪ್ರಾಂತಿಕ ಮಂತ್ರಿಮಂಡಲಗಳು ಮತ್ತು ಕಾಂಗ್ರೆಸ್ ಸಂಸ್ಥೆ ಇನ್ನು ಮುಂದೆ ತಮ್ಮ ಚಟುವಟಿಕೆಗಳನ್ನು ಮಂದಗತಿಯಿಂದ ಸಾಗಿಸತಕ್ಕದ್ದೆಂದು ಕಾಂಗ್ರೆಸ ಕಾರ್ಯಕಾರೀ ಮಂಡಳದವರು ನಿರ್ಧರಿಸಲಿರುವರೆಂದು ತಿಳಿಯುತ್ತದೆ. ದೇಶದಲ್ಲಿ ಸರಿಯಾಗಿ ಆಹಾರ ಪದಾರ್ಥಗಳನ್ನು ಹಂಚುವದು ಎಲ್ಲೆಡೆ ಶಾಂತತೆ ನೆಲೆಸುವಂತೆ ಯೋಜಿಸುವದು ಮೊದಲಾದ ಕಾರ್ಯಗಳಿಗೆ ಇನ್ನು ಮುಂದೆ ಪ್ರಾಮುಖ್ಯತೆಯನ್ನು ಕೊಡಲಾಗುತಿದೆಯಂತೆ. ವಿವಾದಕ್ಕೆ ಅವಕಾಶ ಕೊಡುವ ವಿಷಯಗಳನ್ನು ಸದ್ಯಕ್ಕೆ ಬದಿಗೊತ್ತಿ ಜನತೆಯ ಜೀವನಾವಶ್ಯಕ ಪದಾರ್ಥಗಳನ್ನು ಪೂರೈಸುವದು ಮತ್ತು ದೇಶದಲ್ಲೆಲ್ಲ ಶಾಂತಿಸಮೃದ್ಧಿಯನ್ನುಂಟು ಮಾಡುವದು ಮುಖ್ಯ ಕರ್ತವ್ಯವಾಗಿದೆ. ಈ ಮುಖ್ಯ ಕರ್ತವ್ಯಗಳನ್ನು ಬಿಟ್ಟು ಆಡಳಿತದ ಸುಧಾರಣೆ ಮಾಡಬೇಕೆಂದು ಕಾಂಗ್ರೆಸ ಸರಕಾರಗಳು ಈ ವರೆಗೆ ಧೋರಣವನ್ನಿಟ್ಟುಕೊಂಡದ್ದರಿಂದ ಜನತೆಯಲ್ಲಿ ಭಿನ್ನಾಭಿಪ್ರಾಯ, ತಿಕ್ಕಾಟ, ಪೈಪೋಟಿ (ಪರ್ಷಣೆ)ಗಳು ನಡೆದಿವೆ. ಆಡಳಿತದಲ್ಲಿಯೂ ಶೈಥಿಲ್ಯವುಂಟಾಗಿದೆ. ಲಂಚಗುಳಿತನ ನಿರ್ಮೂಲವಾಗಿಲ್ಲ, ಕೊಲೆ ಸುಲಿಗೆಗಳೂ ನಡೆದಿವೆ. ಸರಕಾರವು ಮೊದಲು ತನ್ನ ಆಡಳಿತವನ್ನು ಭದ್ರಗೊಳಿಸಬೇಕಾದರೆ ಜನತೆಯ ಅವಶ್ಯಕತೆಗಳನ್ನು ಪೂರೈಸಿ ಶಾಂತಿ ಸುವ್ಯವಸ್ಥೆಗಳನ್ನುಂಟುಮಾಡಬೇಕು. ಕಾಂಗ್ರೆಸ ಕಾರ್ಯಕಾರೀ ಮಂಡಳದವರು ಈ ಮಹತ್ವದ ವಿಷಯದ ಬಗ್ಗೆ ಕೂಲಂಕಷ ಚರ್ಚೆ ಮಾಡಿ ಕಾಂಗ್ರೆಸ ಸರಕಾರಗಳಿಗೆ ನಿಶ್ಚಿತ ಮಾರ್ಗವನ್ನು ತೋರಿಸಿಕೊಡಬೇಕು. ಜನತೆಯ ಮೇಲೆ ಸರಕಾರದ ವರ್ಚಸ್ಸು ಕೂಡುವಂತಹ ಜನತೆಯ ವಿಶ್ವಾಸಕ್ಕೆ ಪಾತ್ರವಾಗುವಂತಹ ಧೋರಣವನ್ನೇ ಆಯಾ ಸರಕಾರಗಳು ಅನುಸರಿಸಬೇಕು.

## ಹೊಸ ಪ್ರಾಂತಗಳ ನಿರ್ಮಾಣ

ಭಾಷಾನುಗುಣ ಪ್ರಾಂತಗಳ ಪುನರ್ರಚನೆಯಾಗಬೇಕೆಂಬ ತತ್ವ ಸರ್ವಸಾಮಾನ್ಯ ಮಾನ್ಯವಾದಂತಾಗಿದೆ. ಕಾಂಗ್ರೆಸ್ಸು ತನ್ನ ಆಡಳಿತದಲ್ಲಿ ಆ ಬಗೆಯ ಪ್ರಾಂತಗಳನ್ನು ಕಲ್ಪಿಸಿಕೊಂಡು ಬಿಟ್ಟಿದೆ. ಈ ಪ್ರಾಂತೀಕರಣದ ಪ್ರಶ್ನೆ ದಿನದಿನಕ್ಕೆ ಹೆಚ್ಚು ಅವಶ್ಯಕವೆನಿಸಹತ್ತಿದೆ. ಕೇವಲ ಭಾಷಾನುಗುಣವಾಗಿ ಅಲ್ಲ ಆದರೆ ಧರ್ಮ ಜಾತಿಗಳ ಮೂಲಕವೂ ಹೊಸ ಪ್ರಾಂತಗಳು ಹಿಂದುಸ್ತಾನದಲ್ಲಿ ಆಗಲಿವೆಂಬುದು ನಿರ್ವಿವಾದ. ನವಖಾಲಿಯಲ್ಲಿಯ ಹತ್ಯಾಕಾಂಡದಿಂದ ಜಾಗರೂಕರಾಗಿ ಬಂಗಾಲದಲ್ಲಿಯ ಹಿಂದುಗಳು ಸ್ವತಂತ್ರ ಪ್ರಾಂತವನ್ನು ಬೇಡುತ್ತಾರೆ. ವಂಗಭಂಗ ಮಾಡಬಾರದೆಂದು ೧೯೦೫—೦೬ ರಲ್ಲಿ ಪ್ರಚಂಡ ಚಳವಳಿಯೆಬ್ಬಿಸಿದ ಬಂಗಾಲ ಹಿಂದುಗಳೇ ಇಂದು ಲೀಗಿನ ಧರ್ಮಾಂಧ ಆಡಳಿತಕ್ಕೆ ಬೇಸತ್ತು ಹಿಂದೂ ಬಹುಸಂಖ್ಯಾಕ ಸ್ವತಂತ್ರ ಪ್ರಾಂತವನ್ನು ಬೇಡುತಿರುವರು. ಅದರಂತೆಯೆ ಪಂಜಾಬಿನಲ್ಲಿರುವ ಹಿಂದು ಶೀಖರು ಲೀಗಿನ ಪುಂಡಾಟಿಕೆಯನ್ನು ತಡೆಯಲಾರದೆ ತಮ್ಮ ಬಹುಸಂಖ್ಯಾಕ ಪ್ರಾಂತವನ್ನು ಬೇಡುತಿರುವರು. ತಮ್ಮ ಸಂಖ್ಯೆಯ ಮೂರರಷ್ಟಿದ್ದು ಹಿಂದುಗಳ ರಾಜ್ಯ ತಮ್ಮ ಮೇಲೆ ಬೇಡೆಂದು ಆಕಾಶ ಪಾತಾಳವನ್ನು! ಒಂದುಮಾಡಿಬಿಡುವ ಲೀಗಿನ ರಾಜ್ಯವನ್ನು, ತಮ್ಮ ಸಂಖ್ಯೆಗಿಂತ ನೂರಕ್ಕೆ ಐದು ಹತ್ತು ಮಾತ್ರ ಹೆಚ್ಚಿದ್ದವರ ರಾಜ್ಯವನ್ನು ಬಂಗಾಲದ ಹಿಂದುಗಳು, ಪಂಜಾಬಿನ ಶೀಖರು ಮತ್ತು ಹಿಂದುಗಳು ಏಕೆ ಒಪ್ಪಬೇಕು? ಪಾಕಿಸ್ತಾನ ಬೇಡುವ ಮುಸ್ಲಿಂಲೀಗಿನವರು ಹಿಂದೂ ಶೀಖರ ಈ ಬೇಡಿಕೆಗೆ ಒಪ್ಪಲೇಬೇಕಾಗುತ್ತದೆ. ಇದನ್ನೆಲ್ಲ ನೋಡಿದರೆ ಭಾವೀ ಘಟನೆಯಲ್ಲಿ ಹೊಸ ಪ್ರಾಂತಗಳ ನಿರ್ಮಾಣವಾಗುವದು ನಿಶ್ಚಿತವೆಂದು ಹೇಳಲ ಭ್ಯಂತರವಿಲ್ಲ. ಹೊಸದಾಗಿ ಪ್ರಾಂತಗಳನ್ನು ನಿರ್ಮಿಸುವಾಗ ತಿಕ್ಕಾಟ ಆದಷ್ಟು ಕಡಮೆಯಾಗುವಂತೆ ನೋಡಿಕೊಳ್ಳುವದವಶ್ಯ. ಹೀಗೆ ಪ್ರಾಂತಗಳ ಪುನರ್ರಚನೆಯಾದರೂ ಅಲ್ಪಸಂಖ್ಯಾಕರ ಪ್ರಶ್ನೆ ಇದ್ದೇ ತೀರುವದು, ಅವರನ್ನು ಸಂಭಾಳಿಸಿಕೊಂಡು ಹೋಗುವದು ಬಹುಸಂಖ್ಯಾಕರ ಹೊಣೆಯಾಗಿದೆ. ಇಲ್ಲದಿದ್ದರೆ ಹೊಸ ಪ್ರಾಂತಗಳಲ್ಲಿಯೂ ಸದ್ಯದ ಮಿಶ್ರಪ್ರಾಂತಗಳಲ್ಲಿಯ ಸಮಸ್ಯೆಗಳನ್ನೆದುರಿಸುವ ಪ್ರಸಂಗಬರಬಹುದು. ಅದುದರಿಂದ ಬಹುಸಂಖ್ಯರಿದ್ದವರು ಸಕಾಲದಲ್ಲಿಯೆ ತಮ್ಮ ಆಚಾರ ವಿಚಾರ ಉಚ್ಚಾರ ಕೃತಿಗಳಿಂದ ಅಲ್ಪ ಸಂಖ್ಯಾಕರ ಹಕ್ಕುಬಾಧ್ಯತೆಗಳನ್ನು ರಕ್ಷಿಸಿ ಅವರ ಸಾಧಾರ ಭಯಭೀತಿಗಳನ್ನು ಹೋಗಲಾಡಿಸಬೇಕು. ಸ್ವತಂತ್ರ ಹೊಸ ಪ್ರಾಂತ ರಚನೆಯ ಈ ವಿಷಯವನ್ನು ಘಟನಾ ಸಮಿತಿಯವರು ದುರ್ಲಕ್ಷಿಸಲಾರರೆಂಬುದನ್ನು ಬೇರೆಹೇಳಬೇಕಿಲ್ಲ.

## ಹಿಂದುಸ್ತಾನದ ಮುನ್ನಡೆ

ಹಿಂದುಸ್ತಾನದಲ್ಲಿ ಒಂದು ಬಗೆಯ ಅಶಾಂತ ಪರಿಸ್ಥಿತಿಯಿದ್ದು ಅದಿನ್ನೂ ಸ್ವತಂತ್ರವಾಗಿರದಿದ್ದರೂ ನಡಗಾಲ ಸರಕಾರವು ಅದರ ಮುನ್ನಡೆಗಾಗಿ ಒಂದೇ ಸವನೆ ಪ್ರಯತ್ನಿಸುತಿರುವುದು. ವಿಶೇಷತಃ ಪರರಾಷ್ಟ್ರಗಳಲ್ಲಿ ಹಿಂದುಸ್ತಾನದ ವರ್ಚಸ್ಸು ಬೆಳೆಯಬೇಕೆಂಬ ದೃಷ್ಟಿಯಿಂದ ವಿದೇಶ ಮಂತ್ರಿಗಳಾದ ಪಂಡಿತ ಜವಾಹರಲಾಲ ನೆಹರು ಇವರು ಪ್ರಯತ್ನಿಸುತಿರುವರು. ಪರದೇಶಗಳಲ್ಲಿ ರಾಯಭಾರಿಗಳನ್ನು ನೇಮಿಸಿ ಆಯಾ ಪ್ರಮುಖ ರಾಷ್ಟ್ರ ಮತ್ತು ಹಿಂದುಸ್ತಾನಗಳಲ್ಲಿ ಸ್ನೇಹ ಸಂಬಂಧ ಬೆಳೆಸಲು ಪಂಡಿತ ಜವಾಹರಲಾಲರು ಪ್ರಯತ್ನಿಸುತಿರುವರು. ಅವರು ಈಗಾಗಲೆ ಅಮೇರಿಕೆಯಲ್ಲಿ ಅಸಫಅಲ್ಲಿಯವರಂಥ ನುರಿತ ರಾಜಕಾರಣಿಗಳನ್ನು ರಾಯಭಾರಿಗಳನ್ನಾಗಿ ನೇಮಿಸಿ ಅಮೇರಿಕೆ ಹಿಂದುಸ್ತಾನಗಳ ಮೈತ್ರಿಯನ್ನು ದೃಢಪಡಿಸುವದಲ್ಲಿ ಯಶಸ್ವಿಯಾಗಿರುವರು. ಈಗ ರಶಿಯ ಮತ್ತು ಹಿಂದುಸ್ತಾನಗಳಲ್ಲಿ ಈ ಬಗೆಯ ರಾಯಭಾರಿ ಸಂಬಂಧವನ್ನು ಬೆಳೆಸುವಲ್ಲಿ ಯಶಸ್ವಿಯಾದುದು ತುಂಬ ಸಂತೋಷಕರವಾದ ಸಂಗತಿ. ಈ ಸ್ಥಳಕ್ಕೆ ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ನೇಮಿಸಲ್ಪಡುವ ಸುದ್ದಿ ಮತ್ತಷ್ಟು ಸಂತೋಷವಾಯಕವಾದುದು. ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀಯರ ಹಕ್ಕುಬಾಧ್ಯತೆಗಳನ್ನು ರಕ್ಷಿಸುವಲ್ಲಿ ಪಂಡಿತ ವಿಜಯಲಕ್ಷ್ಮಿಯವರು ಮಾಡಿದ ಪ್ರಚಂಡ ಕಾರ್ಯ, ಪಡೆದ ಯಶಸ್ಸು ಇವುಗಳನ್ನು ನೋಡಿದರೆ ಮಾಸ್ಕೋದಲ್ಲಿ ರಾಯಭಾರಿಗಳಾಗಲು ಅವರು ಸರ್ವಥೈವ ಯೋಗ್ಯರಾಗಿರುವರು. ರಾಯಭಾರಿ ಸಂಬಂಧ ಹಿಂದುಸ್ತಾನ ರಶಿಯಗಳಲ್ಲಿ ಬೆಳೆಸಲಾಗಿದೆಂಬ ಬಗ್ಗೆ ಈಗಾಗಲೆ ಪ್ರಕಟನೆ ಹೊರಬಿದ್ದು ಆ ಸ್ಥಳಕ್ಕೆ ಯಾರನ್ನು ನೇಮಿಸಲಾಗುವದೆಂಬ ಬಗ್ಗೆ ಇಷ್ಟರಲ್ಲಿಯೆ ಪ್ರಕಟನೆ ಹೊರಡಲಿದೆ. ಇನ್ನುಳಿದ ಪ್ರಮುಖ ರಾಷ್ಟ್ರಗಳೊಡನೆಯೂ ರಾಯಭಾರಿ ಸಂಬಂಧ ಬೆಳೆಸಬೇಕೆಂದು ಪಂಡಿತ ಜವಾಹರಲಾಲರು ಹವಣಿಸುವರು. ಅವರೀ ಕಾರ್ಯಕ್ಕೆ ಸಫಲವಾಗಿ ಅಂತರ್‌ರಾಷ್ಟ್ರೀಯ ಜಗತ್ತಿನಲ್ಲಿ ಹಿಂದುಸ್ತಾನ ಪ್ರಮುಖ ಪಾತ್ರ ವಹಿಸಲೆಂದು ಬಯಸುತ್ತೇವೆ.

# ಹರಮುರಕು ಪಾಕಿಸ್ತಾನವಾದರೂ ಚಿಂತಿಲ್ಲ, ಅಖಂಡ ಭಾರತ ಬೇಡೆಂದು ಜಿನ್ನಾರ ಹಟ?– ವಾಯಿಸರಾಯರು ಹೊಸ ಯೋಜನೆ ಮಾಡಿರುವರೆ? — ಪಂಜಾಬ ವಿಭಜನೆಗೆ ಗವರ್ನರರ ಬೆಂಬಲ

ಲಾರ್ಡ ಲುಯಿ ಮೌಂಟಬ್ಯಾಟನ್ನರು ಮುಂದಾಳುಗಳೊಡನೆ ದೀರ್ಘ ಮಾತುಕತೆ ನಡೆಸುತಿರುವಾಗ ನಾಲ್ಕೂ ಸುತ್ತಲೂ ಹಬ್ಬಿದ ಉತ್ಕಂಠಿತ, ಅರ್ಧ ನಿರಾಶ ವಾತಾವರಣದಲ್ಲಿ ಒಂದೇ ಒಂದು ಪ್ರಕಾಶ ಕಿರಣವೆಂದರೆ ಗಾಂಧೀಜಿ ಮತ್ತು ಜಿನ್ನಾ ಸಾಹೇಬರು ಜತೆ ಹೇಳಿಕೆ ಹೊರಡಿಸಿ ದೇಶದಲ್ಲಿ ಹಬ್ಬಿರುವ ಹಿಂಸಾಚಾರವನ್ನು ಖಂಡಿಸಿದ್ದು. ಹೊಸ ವಾಯಿಸರಾಯರು ಸಾಧಿಸಿದ ಮಹಾ ಕಾರ್ಯವಿದೆಂದು ಪ್ರಶಂಸಿಸಲಾಗುತಿದೆ. ಈ ಜತೆ ಹೇಳಿಕೆಯಲ್ಲಿ ಯಾವುದೇ ಬಗೆಯ ರಾಜಕೀಯ ವಾಗ್ಬಂಧವಿಲ್ಲದಿದ್ದರೂ, ಉಚ್ಚ ವರ್ಗಗಳಲ್ಲಿ ಇವಕ್ಕೆ ಬಹಳ ಮಹತ್ವ ಕೊಡಲಾಗಿದೆಯೆಂಬುದು ತಾ. ೧೬ ಕ್ಕೆ ಕೇಂದ್ರ ವಿಧಿಮಂಡಲದಲ್ಲಿ ಆ ಬಗ್ಗೆ ನಡೆದ ಚರ್ಚೆಯಿಂದ ವಿದಿತವಾಗುತ್ತದೆ. ಹೇಳಿಕೆಗೆ ವಿಧಿಮಂಡಲದ ಎಲ್ಲ ಪಕ್ಷ ಸಂಗಡಗಳ ಸದಸ್ಯರೂ ಹೃತ್ಪೂರ್ವಕ ಬೆಂಬಲ ಕೊಟ್ಟರು. ಕಾಂಗ್ರೆಸಿನ ಶ್ರೀ ಮೋತೀಲಾಲರು, ಲೀಗಿನ ಮಹಮದ ಸಾದತಹಾರವರು, ಪಂಡಿತಹೃದಯನಾಥ ಕುಂಝ್ರುರು, ಸರ್ ಶೋಭಾಸಿಂಗ, ಸರ್ ಡೇವಿಡ ದೇವದಾಸ, ಅಬ್ದುರ್‍ರಬ ನಿಶ್ತಾರ, ಡಾ. ರಾಜೇಂದ್ರ ಪ್ರಸಾದ ಹಾಗು ಸಭಾಧ್ಯಕ್ಷರಾದ ಹುಸೇನ ಇಮಾಮು ಇವರೆಲ್ಲರೂ ಈ ಜತೆ ಹೇಳಿಕೆಯನ್ನು ಸಮರ್ಥಿಸಿದ್ದಲ್ಲದೆ ಹಿಂಸಾಚಾರವನ್ನು ಹತ್ತಿಕ್ಕಲು ಸರಕಾರ ಯೋಗ್ಯ ಕ್ರಮವನ್ನು ಕೈಕೊಳ್ಳಬೇಕೆಂದು ಸೂಚಿಸಿ ಭಾಷಣ ಮಾಡಿದರು. ಜಾತೀಯ ಗಲಭೆಗಳು ದೇಶದ ಹೆಸರಿಗೆ ಕಲಂಕಪ್ರಾಯವಾಗಿದ್ದು ಸ್ವಾತಂತ್ರ್ಯ ಸನ್ನಿಹಿತವಾಗಿರುವ ಕಾಲದಲ್ಲಿ ಹೀಗೆ ವರ್ತಿಸಿದರೆ ಪರಕೀಯರು ಬಂದು ಅದನ್ನು ಡುಗಿಬಿಡುವರೆಂಬ ಭಾವಕ್ಕೆ, ಸರ್ವರ ಬೆಂಬಲವೂ ದೊರಕಿತು.

## ಕಾಂಗ್ರೆಸ್ಸಿನ ಮಾರ್ನೆನಪು

ಆದರೆ ಇದು ಹೊರತು ಅಂಥ ಆಶಾದಾಯಕವಾದ ಮಾತೇನೂ ಈ ವಾರ ಜರಗಲಿಲ್ಲ. ಸ್ವಾತಂತ್ರ್ಯದ ಹೊಣೆಯಿಂದ ಚಿಂತಾಕ್ರಾಂತವಾದ ಕಾಂಗ್ರೆಸ್ಸು ಪ್ರತಿಷ್ಠೆಯ ಮರುಳನ್ನು ಬದಿಗಿಟ್ಟು ಅನೇಕ ಮುಖವಾಗಿ ಲೀಗನ್ನು ಒಲಿಸಲು ಪ್ರಯತ್ನ ಪಟ್ಟಿದೆ. ಪಂ. ಜವಾಹರಲಾಲ, ಸರದಾರ ಪಟೇಲ, ಡಾ. ರಾಜೇಂದ್ರ ಪ್ರಸಾದರು ತಮ್ಮ ಭಾಷಣಗಳಲ್ಲಿ ಲೀಗಿಗೆ ಸ್ವಾತಂತ್ರ್ಯದ ಹೊಣೆ ಹೊರುವಲ್ಲಿ ಪಾಲುಗಾರರಾಗಲು ಹಲವಾರಿ ಆಮಂತ್ರಣವಿತ್ತಿದ್ದಾರೆ. "ವಿವಿಧ ರಾಜಕೀಯ ಸಂಗಡಗಳ ಧುರೀಣರು ಒಂದೆಡೆ ಸೇರಿ ಯಾವುದಾದರೊಂದು ನಿರ್ಣಯಕ್ಕೆ ಬರುವದೀಗ ಅನಿವಾರ್ಯವಾಗಿದೆ. ಕಾಂಗ್ರೆಸ್ ಕಾರ್ಯ ಸಮಿತಿ ಲೀಗಿಗೆ ವಿಚಾರವಿನಿಮಯಕ್ಕಾಗಿ ಆಮಂತ್ರಣವಿತ್ತು ೪೦ ದಿನಗಳಾದವು. ಆದರೆ ಲೀಗಿನಿಂದ ಯಾವುದೇ ಪುರಸ್ಕಾರ ಇದಕ್ಕೆ ದೊರೆಯಲಿಲ್ಲ. ವೈಸರಾಯರು ನಮ್ಮ ಮತಭೇದವನ್ನು ಬಗೆಹರಿಸುವದು ಕಾಂಗ್ರೆಸ್ಸಿಗೆ ಬೇಡವಾಗಿದೆ. ಭಾರತೀಯರೆ ತಮ್ಮ ಭವಿತವ್ಯವನ್ನು ನಿರ್ಧರಿಸಿಕೊಳ್ಳಬೇಕು" ಎಂದು ಪಂ. ನೆಹರೂ ಅವರು ದಿಲ್ಲಿಯಲ್ಲಿ ಜಾಲಿಯಾನವಾಲಾಬಾಗ ದಿನಾಚರಣೆಯ ಸಭೆಯಲ್ಲಿ ಹೇಳಿದರು. "ಪಾಕಿಸ್ತಾನ ಲೀಗಿನ ಧ್ಯೇಯವಾಗಿದೆ. ಕೆಲವರು ಇದನ್ನು ಒಪ್ಪುತ್ತಾರೆ, ಕೆಲವರು ಒಪ್ಪುವದಿಲ್ಲ. ಈ ಸಮಸ್ಯೆಯನ್ನು ಪರಸ್ಪರ ಸಮ್ಮತಿಯಿಂದ ಇಲ್ಲವೆ ಯುದ್ಧದಿಂದ ಬಗೆಹರಿಸಬೇಕಲ್ಲದೆ ಬೇರೆ ಹಾದಿಯಿಲ್ಲ. ಪಾಕಿಸ್ತಾನದ ವ್ಯಾಖ್ಯೆಯನ್ನು ನಾವೆಷ್ಟು ಸಲ ಕೇಳಿದರೂ ಅವರು ಕೊಡಲೊಲ್ಲರು. ಸಂಗತಿಗಳನ್ನು ಸ್ಪಷ್ಟಗೊಳಿಸಲಿಲ್ಲವಾದರೆ ತೊಂದರೆಗಳುಂಟಾಗುವದು ಸಹಜ... ಬ್ರಿಟಿಶರನ್ನು ಹೊರದೂಡಿದರೆ ನಾಲದು ಒಂದೇ ರಾಷ್ಟ್ರವಾಗಿ ನಾವು ಮುಂದುವರಿಯಬೇಕು. ನಮ್ಮ ಹೊಣೆಯನ್ನು ನಾವು ಅರಿತುಕೊಳ್ಳಬೇಕು. ಆದರೆ ಕೆಲವರು ನಮ್ಮೊಡನೆ ಸಾಗಬಯಸುವದಿಲ್ಲ. ಅವರಿಗೆ ನಾವು ಒತ್ತಾಯಮಾಡುವದಿಲ್ಲ"... "ಹಿಂದುಸ್ತಾನ ಅಖಂಡವಾಗಿರಬೇಕೋ ಬೇಡವೋ ಎಂಬದನ್ನು ನಿರ್ಧರಿಸುವ ಕಾಲವೀಗ ಬಂದಿದೆ. ಪಾಕಿಸ್ತಾನವನ್ನಾಗಲಿ ಹಿಂದುಸ್ತಾನವನ್ನಾಗಲಿ ಸೇರಬೇಕೆಂದು ನಾವು ಯಾವದೇ ಪ್ರಾಂತವನ್ನಾಗಲಿ ಪ್ರದೇಶವನ್ನಾಗಲಿ ಒತ್ತಾಯಗೊಳಿಸುವದಿಲ್ಲ. ಸಿಂಧು ಸ್ವತಂತ್ರವಾಗಬೇಕೆಂದಿದೆ. ಹಿಂದುಸ್ತಾನದೊಡನೆ ಸಂಬಂಧ ಬಿಟ್ಟುಕೊಳ್ಳದಿದ್ದರೆ ತಮಗೇ ಹಾನಿಯೆಂದು ಆ ಪ್ರಾಂತದ ಧುರೀಣರಿಗಿನ್ನೂ ಹೊಳೆದಿಲ್ಲ. ಬಂಗಾಲದ ಪರಿಸ್ಥಿತಿಯೂ ಹಾಗೆಯೆ ಇದೆ. ಬಂಗಾಲ ಪಂಜಾಬಗಳಲ್ಲಿ ಕೆಲವರು ಬೇರೆಯಾಗ ಬಯಸಿದರೆ ಅವರನ್ನಾರೂ ತಡೆಯಲಾರರು" ಎಂದೂ ಪಂಡಿತರು ಹೇಳಿದರು. ಈ ಎಲ್ಲ ಮಾತುಗಳಲ್ಲಿ ಒಂದು ಬಗೆಯ ಕಳಕಳಿಯ ವಿನಂತಿಯೂ ಪಾಕಿಸ್ತಾನದ ಬೇಡಿಕೆ ಮತ್ತು ವ್ಯಾಖ್ಯೆ ನ್ಯಾಯ್ಯವಾಗಿದ್ದರೆ ಅದನ್ನು ಒಪ್ಪುವ ಮನೋವೃತ್ತಿಯೂ ವ್ಯಕ್ತಪಡಿಸಲ್ಪಟ್ಟಿದೆಯೆಂದು ಹೇಳಬಹುದು.

ಸರದಾರ ಪಟೇಲರೂ "ಭಾರತವನ್ನು ವಿಚ್ಛೇದಿಸತಕ್ಕದ್ದಲ್ಲ. ಆದರೆ ಅದನ್ನು ವಿಚ್ಛೇದಿಸುವ ಪ್ರಸಂಗವೇ ಬಂದಲ್ಲಿ ನಮ್ಮಲ್ಲಿಯೆ ಪರಸ್ಪರ ಚರ್ಚೆಯಿಂದ ಹಾಗು ಶಾಂತರೀತಿಯಲ್ಲಿ ಅದನ್ನು ಮಾಡಬೇಕಾಗುವದು. ವಿದೇಶಿ ಸರಕಾರವೆಷ್ಟೆ ಬಲಿಷ್ಠವಿದ್ದರೂ ದೇಶವನ್ನು ವಿಚ್ಛೇದಿಸಲು ಸಮರ್ಥವಾಗದು. ಪಾಕಿಸ್ತಾನಕ್ಕಾಗಿ ಮುಸ್ಲಿಮರು ಬ್ರಿಟಿಶರ ಮೋರೆ ನೋಡುತ್ತ ಕೂಡುವದರಲ್ಲಿ ಅರ್ಥವಿಲ್ಲ" ಎಂದು ಮುಂಬಯಿ ಸಭೆಯೊಂದರಲ್ಲಿ ಹೇಳಿದರು. ಸುರತದ ಮತ್ತೊಂದು ಭಾಷಣದಲ್ಲಿ ಅವರು "ಕಾಂಗ್ರೆಸ್ಸಿನ ಆಮಂತ್ರಣವನ್ನು ಲೀಗು ಪುನರಾಲೋಚಿಸಬೇಕು. ಘಟನಾ ಸಮಿತಿಗೂ ತಮ್ಮ ಪ್ರತಿನಿಧಿಗಳನ್ನು ಕಳಿಸಿಕೊಟ್ಟು ತಮ್ಮ ಶಂಕೆಗಳನ್ನು ತಿಳಿಹೇಳಬೇಕು. ಇಲ್ಲದಿದ್ದರೆ ೧೯೪೮ ಜೂನ ನಂತರವೂ ಬ್ರಿಟಿಶರು ಇಲ್ಲಿ ಉಳಿಯುವಂತಾಗಬಹುದು" ಎಂದು ವಿನಂತಿಸಿಕೊಂಡರು.

## ವ್ಹಾಯಿಸರಾಯರ ಪ್ರಯತ್ನಗಳು

ವ್ಹಾಯಿಸರಾಯರಾದರೂ ಮೇ ೧೬ ರ ಘೋಷಣೆಯ ತಳಹದಿಯಲ್ಲಿ ಕಾಂಗ್ರೆಸ್ ಲೀಗುಗಳನ್ನು ಒಂದು ಗೂಡಿಸಲು ಕಳೆದ ಮೂರು ವಾರಗಳಿಂದ ಪ್ರಯತ್ನಿಸಿದರೆಂದು ಹೇಳಬಹುದು ಕಾಂಗ್ರೆಸ್ ಲೀಗುಗಳು ಆ ಯೋಜನೆಯ ತಳಹದಿಯಲ್ಲಿ ಒಂದಾನೊಂದು ಕಾಲದಲ್ಲಿ ತೀರ ಸಮೀಪಕ್ಕೆ ಬಂದುದರಿಂದ ಅವರಾದರೂ ಅದರ ಮೇಲೆಯೇ ಸಹಜವಾಗಿ ಆಸೆಯನ್ನಿಟ್ಟಿದ್ದಾರೆಂದು ತೋರುತ್ತದೆ. ಅದೂ ಅಲ್ಲದೆ ಜಿನ್ನಾರು ಸ್ವತಂತ್ರ ಪಾಕಿಸ್ತಾನದ ಹಟಕ್ಕೇ ಅಂಟಿಕೊಂಡರೆ ಅವರು ಹಿಂದೊಮ್ಮೆ ಹೇಳಿದ "ಹರಿದ್ದು ವಿರೂಪವಾದ ಪಾಕಿಸ್ತಾನ"ವನ್ನೇ ಸ್ವೀಕರಿಸಬೇಕಾಗುವದೆಂದೂ ಹಿಂದೂ-ಸೀಖ ಬಹುಸಂಖ್ಯಾಕರನ್ನೊಳಗೊಂಡ ವಿಸ್ತಾರ ಪ್ರದೇಶಗಳನ್ನು ಪಾಕಿಸ್ತಾನದಲ್ಲಿ ಸೇರಿಸುವದು ಸಾಧ್ಯವಿಲ್ಲವೆಂದೂ ತಿಳಿಸಿದರೆಂದು ನಂಬಲಾಗಿದೆ. ಪಂಜಾಬ ಬಂಗಾಲಗಳಲ್ಲಿ ಅರ್ಧಮರ್ಧವನ್ನು ಕಳೆದುಕೊಂಡರೆ ಪಾಕಿಸ್ತಾನ ಸಂಗ್ರಹ ಯೋಗ್ಯವಲ್ಲೆಂದು ಜಿನ್ನಾರಿಗೆ ಮನವರಿಕೆಯಾಗಿ ಅವರು ತಮ್ಮ ಅಟ್ಟದಿಂದ ಕೆಳಗಿಳಿಯಬಹುದೆಂದು ಭಾವಿಸಲಾಗಿತ್ತು.

## ಜಿನ್ನಾರು ಕದಲಲೊಲ್ಲರು?

ಆದರೆ ಕಾಂಗ್ರೆಸ್ಸೂ ವಾಯಿಸರಾಯರೂ ಮಾಡಿದ ಈ ಪ್ರಯತ್ನಗಳು ಎಷ್ಟು ಮಟ್ಟಿಗೆ ಫಲಕಾರಿಯಾದವು? ಕಾಂಗ್ರೆಸ್ ಕಾರ್ಯ ಸಮಿತಿಯ ಆಮಂತ್ರಣವನ್ನು ವಿಚಾರಿಸಲು ಲೀಗ್ ಕಾರ್ಯಸಮಿತಿಯನ್ನು ಎಂದು ಕರೆಯುವಿರೆಂದು ಕಾಂಗ್ರೆಸ್ ಕಾರ್ಯದರ್ಶಿ ಶ್ರೀ ದೇವರು ಪತ್ರಮುಖದಿಂದ ವಿಚಾರಿಸಿದ್ದಕ್ಕೆ ಲೀಗ್ ಕಾರ್ಯದರ್ಶಿ ಲಿಯಾಕತ ಅಲ್ಲಿಯವರಿಂದ ಬಂದ ಉತ್ತರದಲ್ಲಿ ಸದ್ಯಕ್ಕೆ ಲೀಗ್ ಕಾರ್ಯಸಮಿತಿಯನ್ನು ಕರೆಯುವ ಪರಿಸ್ಥಿತಿ ಉತ್ಪನ್ನವಾಗಿಲ್ಲವೆಂದು ತಿಳಿಸಲ್ಪಟ್ಟಿತು. ಆದರೆ ಅದರ ನಂತರ "ಲೀಗ್ ಕಾರ್ಯಸಮಿತಿಯ ಸದಸ್ಯರೊಬ್ಬರು" ಬ್ರಿಟಿಶ ಘೋಷಣೆಯಿಂದ ಉದ್ಭೂತವಾದ ಪರಿಸ್ಥಿತಿಯನ್ನು ಎದುರಿಸಲು "ಮುಸ್ಲಿಂ ರಾಷ್ಟ್ರಕ್ಕೆ ಹೊಣೆಗಾರವಾದ" ಲೀಗಿಗೂ ಕಾಂಗ್ರೆಸ್ಸಿನಷ್ಟೇ ಆತುರವುಂಟೆಂದೂ ಲೀಗ್-ಕಾಂಗ್ರೆಸ್ ಚರ್ಚೆ ಯಾವ ತಳಹದಿಯ ಮೇಲೆ ನಡೆಯುವದೆಂದು ಕಾಂಗ್ರೆಸ್ ಕಾರ್ಯಸಮಿತಿಯನ್ನು ಲೀಗು ಕೇಳಿದೆಯೆಂದೂ ಸುದ್ದಿಗಾರರಿಗೆ ಹೇಳಿದರೆಂದು ವರದಿಯಾಗಿದೆ. ಇದು ನಿಜವಾಗಿದ್ದರೂ ಅಷ್ಟೊಂದು ಆಶಾದಾಯಕವೆನ್ನಬರುವದಿಲ್ಲ. ಪಾಕಿಸ್ತಾನ ತಳಹದಿಯಲ್ಲಿ ಸಂಧಿಮಾಡಿಕೊಳ್ಳಲು ಮುಂಬಯಿ ಭಾಷಣದಲ್ಲೇ ಜಿನ್ನಾರು ಸನ್ನದ್ಧರಾಗಿದ್ದರು. ಜವಾಹರರೆಂದಂತೆ ಆ ಪಾಕಿಸ್ತಾನವೆಂದರೇನು, ಅಲ್ಲಿ ಯಾವ ಬಗೆಯ ಆಳಿಕೆಯಿರುವದು ಎಂಬದಕ್ಕೆ ಮಾತ್ರ ಉತ್ತರ ಬಂದಿಲ್ಲ.

ಇನ್ನು ಜಿನ್ನಾ—ವಾಯಿಸರಾಯ, ಗಾಂಧಿ—ವಾಯಿಸರಾಯ ಮಾತುಕತೆಗಳಿಂದಾದರೂ ಆಶಾದಾಯಕವಾದುದೇನೂ ಹೊರಡಲಿಲ್ಲವೆಂದು ಊಹಿಸಲು ಬೇಕಾದಷ್ಟು ಕಾರಣಗಳಿವೆ. ಕಾಂಗ್ರೆಸ್ ಲೀಗುಗಳನ್ನು ಒಂದೆಡೆ ಸೇರಿಸಬಲ್ಲ ತಳಹದಿಯ ಇನ್ನೂ ಲಭಿಸಿಲ್ಲವಂತೆ. ಜಿನ್ನಾಸಾಹೇಬರು ತಮ್ಮ ಮುಂಬಯಿ ನಿರ್ಣಯಕ್ಕೆ ಬಲವಾಗಿ ಅಂಟಿಕೊಂಡು ಯಾವುದೇ ಬಗೆಯ ಒಕ್ಕೂಟಕ್ಕೆ—ದುರ್ಬಲ ಒಕ್ಕೂಟಕ್ಕೆ ಕೂಡ—ವಿರೋಧ ತೋರಿಸಿದರೆಂದು ತಿಳಿಯುತ್ತದೆ. ಸ್ವತಂತ್ರ ಪಾಕಿಸ್ತಾನವೇ ಅವರ ಹಟವಾಗಿದೆಯಂತೆ. ಈ ಊಹೆ ಸತ್ಯವಾಗಿರಬಹುದೆಂದು ಜಿನ್ನಾರ "ಡಾನ್" ಪತ್ರಿಕೆಯ ಅಗ್ರಲೇಖವೊಂದರಿಂದ ಕಾಣುತ್ತದೆ. "ಹಿಂದೂಗಳೂ ಮುಸ್ಲಿಮರೂ ಒಟ್ಟಾಗಿ ಬಾಳುವದು ಸಾಧ್ಯವೇ ಇಲ್ಲ. ಒಟ್ಟಾಗಿ ಆಡಳಿತೆ ನಡೆಸುವದೂ ಸಾಧ್ಯವಿಲ್ಲ. ದುಂಡು ಮೇಜಿನ ಪರಿಷತ್ತನ್ನು ಸೇರಿಸುವ ಕಾಲ ಮೀರಿಹೋಗಿದೆ" ಎಂದು ಪಂ. ನೆಹರೂ ಅವರಿಗೆ ಅದು ಉತ್ತರ ಕೊಟ್ಟು "ಲೆತ್ತ ಒಗೆದಾಗಿದೆ. ಹಿಂದುಸ್ತಾನವನ್ನು ವಿಭಜಿಸಲೇ ಬೇಕು" ಎಂದು ನುಡಿದಿದೆ. ಜಿನ್ನಾಸಾಹೇಬರು ಪ್ರಾಂತಗಳ ವಿಭಜನೆಗೆ ಕೂಡ ಸಿದ್ಧರಾಗಿದ್ದಾರೆಂದು ನಂಬಲಾಗಿದೆ. ಪಾಕಿಸ್ತಾನದ ಗಡಿ ನಿರ್ಣಯವನ್ನು ಅಂತರ್‍ರಾಷ್ಟ್ರೀಯ ಸಮಿತಿಯ ತೀರ್ಮಾನಕ್ಕೆ ಒಪ್ಪಿಸಲು ಅವರು ಸಿದ್ಧರಾಗಿದ್ದಾರೆಂದು ಕೆಲವರು ಹೇಳುತ್ತಾರೆ. ಆದರೆ ಇನ್ನೊಂದು ವರದಿಯನ್ವಯ ಪಂಜಾಬದ ಅಂಬಾಲಾ ವಿಭಾಗವನ್ನು ಮಾತ್ರ ಬಿಟ್ಟುಕೊಡಲು ಜಿನ್ನಾರು ಸಮ್ಮತಿಸಿದ್ದಾರೆಂದೂ ಉಳಿದ ಪೂರ್ವ ಪಂಜಾಬವನ್ನು ಬಿಟ್ಟುಕೊಡಲು ಅವರು ಸಿದ್ಧರಿಲ್ಲವೆಂದೂ ಬಂಗಾಲ ವಿಭಜನೆಯ ಪ್ರಶ್ನೆಯನ್ನು ಅವರಿನ್ನೂ ವಿಚಾರಿಸಿಲ್ಲವೆಂದೂ ತಿಳಿಯುತ್ತದೆ.

## ವಾಯಿಸರಾಯರ ಹಾದಿ

ಹೀಗೆ ಕಾಂಗ್ರೆಸ್-ಲೀಗುಗಳಲ್ಲಿ ಐಕ್ಯವನ್ನುಂಟುಮಾಡುವ ಪ್ರಯತ್ನಕ್ಕೆ ಯಶಸ್ಸು ದೊರೆಯದುದರಿಂದ ವಾಯಿಸರಾಯರಿಗೆ ಗಾಂಧೀಜಿಯ ಸೂಚನೆಯಂತೆ ಕಾಂಗ್ರೆಸ್ಸಿಗಾಗಲಿ ಲೀಗಿಗಾಗಲಿ ಅಧಿಕಾರವನ್ನೊಪ್ಪಿಸಿ ಹೊರಟುಹೋಗುವದೊಂದೇ ಉಪಾಯವುಳಿದಿದೆ. ಗಾಂಧೀಜಿಯವರು ವಾಯಿಸರಾಯರಿಗೆ ಏನೇನು ಹೇಳಿದರೆಂಬುದು ಗೊತ್ತಿಲ್ಲ. ಅವರೀಗ ಮುಂದಿನ ವಿಚಾರವನ್ನು ಕಾಂಗ್ರೆಸ್ಸಿಗೆ ಬಿಟ್ಟು ತಮ್ಮ ಐಕ್ಯ ಕಾರ್ಯಕ್ಕಾಗಿ ಬಿಹಾರಕ್ಕೆ ಮರಳಿದ್ದಾರೆ. ಆದರೆ ಅವರು ಹೇಳಿದ ಉಪಾಯ ವಾಯಿಸರಾಯರಿಗೆ ಎಷ್ಟುಮಟ್ಟಿಗೆ ಸಮ್ಮತವಾಗಿದೆಯೋ ಗೊತ್ತಿಲ್ಲ. ಕಾಂಗ್ರೆಸ್ಸಿನೊಡನೆ ಗಾಂಧೀಜಿ ಜಗಳ ಮಾಡಿದ್ದಾರೆಂದು ಕೂಡ ಸುದ್ದಿ ಹಬ್ಬಿತ್ತು! ಅದನ್ನು ಅವರು ಒಡನೆ ನಿರಾಕರಿಸಿದರು. ಇರಲಿ. ವಾಯಿಸರಾಯರು ತಮ್ಮದೇ ಆದ ಯೋಜನೆಯೊಂದನ್ನು ಸಿದ್ಧಗೊಳಿಸುವವರಿದ್ದು ಆ ಯೋಜನೆ ಮೇ ಅಂತ್ಯದೊಳಗೆ ಬ್ರಿಟಿಶ ಸರಕಾರದ ಸಮ್ಮತಿ ಮುದ್ರೆಯೊಡನೆ ಹೊರಬೀಳಬಹುದೆಂದು ನಂಬಲಾಗಿದೆ. ಹೀಗೆ ಯೋಜನೆ ಮಾಡಿ ತಾವು ಹಿಂದೀಯರ ಸಮಸ್ಯೆಯನ್ನು ಬಿಡಿಸಬೇಕಾಗಿ ಬಂದುದು ಅವರಿಗಾಗಲಿ ಬ್ರಿಟಿಶ ಸರಕಾರಕ್ಕಾಗಲಿ ಪ್ರಿಯವಾಗಿಲ್ಲವಂತೆ. ಆದರೂ ವಿಧಿಯಿಲ್ಲದೆ ಅವರೊಂದು ನಿರ್ಣಯಕ್ಕೆ ಬರಬೇಕಾಗಿದೆ. ಆದರೆ ವಾಯಿಸರಾಯರ ಯೋಜನೆ ಮಾತ್ರ ಎಲ್ಲರಿಗೂ ಸ್ವೀಕಾರಾರ್ಹವಾಗುವದೆಂಬ ವಿಶ್ವಾಸ ಅವರಿಗಿದೆಯೆಂದೂ ಆ ತಳಹದಿಯ ಮೇಲೆ ಅವರು ಕಾಂಗ್ರೆಸ್-ಲೀಗ್ ಮುಂದಾಳುಗಳನ್ನು ಒಂದೆಡೆ ಸೇರಿಸಲಿರುವರೆಂದೂ ಸುದ್ದಿಗಾರರು ತರ್ಕಿಸುತ್ತಾರೆ.

## ಗವರ್ನರ ಪರಿಷತ್ತು

ವಾಯಿಸರಾಯರ ಈ ಮಂತ್ರಾಸ್ತ್ರವಾವುದಿರಬಹುದು? ಸದ್ಯಕ್ಕೆ ದಿಲ್ಲಿಯಲ್ಲಿ ಕೂಡಿರುವ ಪ್ರಾಂತಿಕ ಗವರ್ನರರ ಪರಿಷತ್ತು ಮುಕ್ತಾಯವಾದೊಡನೆ ಅದರ ಸಂಜ್ಞೆಯೇನಾದರೂ ಹೊರಬಿದ್ದರೂ ಬೀಳಬಹುದು. ಗವರ್ನರರ ಪರಿಷತ್ತಿನಲ್ಲಿ ನಾನಾ ವಿಧ ಸಮಸ್ಯೆಗಳು ಚರ್ಚಿಸಲ್ಪಡುತ್ತಿವೆ. ಪ್ರತ್ಯೇಕಿತ ಮತ್ತು ಅರ್ಧ ಪ್ರತ್ಯೇಕಿತ ಮತ್ತು ಗುಡ್ಡಗಾಡು ಭಾಗಗಳ ಆಡಳಿತವನ್ನು ತಮಗೊಪ್ಪಿಸಬೇಕೆಂದು ಪ್ರಾಂತಿಕ ಮಂತ್ರಿಮಂಡಲಗಳು ಒತ್ತಾಯಗೊಳಿಸಿವೆ. ಮುಖ್ಯವಾಗಿ ಗಡಿನಾಡ ಸರಕಾರ ಗವರ್ನರರನ್ನು ಈ ವಿಷಯದಲ್ಲಿ ಒತ್ತಾಯಗೊಳಿಸುತಿದೆ. ಆದರೆ ಗಡಿನಾಡ ಗವರ್ನರರು ಇದಕ್ಕೆ ವಿರೋಧಿಗಳಾಗಿದ್ದಾರೆ. ಅವರಿಗೆ ಜಿನ್ನಾ ಸಾಹೇಬರ ಬೆಂಬಲವೂ ಇದೆ. ಪಂಜಾಬದ ಅನಾಹುತ ಒಂದು ಹಿಡಿತಕ್ಕೆ ಬಂದರೂ ಗಡಿನಾಡಿನದು ಶಾಂತವಾಗುವ ಇನ್ನೂ ಲಕ್ಷಣ ತೋರುತ್ತಿಲ್ಲ. ಮೊನ್ನೆ ಮೊನ್ನೆ ಡೇರಾ ಇಸ್ಮಾಯಿಲಖಾನದಲ್ಲಿ ಅತ್ಯಂತ ಪ್ರಕಾಂಡವಾದ ಉರಿ ಹಚ್ಚುವ ಕಾಯಕವನ್ನು ಲೀಗಿನವರು ಅಲ್ಲಿ ತೋರಿಸಿದರು. ಅಲ್ಲಿಯ ಪರಿಸ್ಥಿತಿ ವಿಕೋಪಕ್ಕೆ ಹೋಗಿದೆ. ಹಿಂದೂ ಸೀಖ ಅಲ್ಪಸಂಖ್ಯಾಕರ ಜೀವಿತ ವಿತ್ತಗಳು ಸರ್ವಥಾ ಅಸುರಕ್ಷಿತವಾಗಿವೆ. ಈ ಗಲಭೆಗಳನ್ನು ಹತ್ತಿಕ್ಕಲು ಉಗ್ರ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕೆಂದು ಗವರ್ನರರಿಗೆ ಆಜ್ಞಾಪಿಸಲಾಗಿದೆಯಂತೆ. ಪಂಜಾಬದಲ್ಲಿ ಸರ್ವಪಕ್ಷ ಸರಕಾರ ಸ್ಥಾಪಿಸಲು ಸಾಧ್ಯವಾಗದಿದ್ದರೆ ಅದನ್ನು ವಿಭಜಿಸದೆ ವಿಧಿಯಿಲ್ಲವೆಂದು ಪಂಜಾಬ ಗವರ್ನರರು ವಾಯಿಸರಾಯರಿಗೆ ಮನಗಾಣಿಸಿದ್ದಾರಂತೆ. ಬಂಗಾಲ ವಿಭಜನೆಯ ಚಳವಳಿಯೂ ಬೆಳೆಯುತಿದ್ದು ಕೇಂದ್ರ ಶಾಸನ ಸಭೆಯ ೧೧ ಸದಸ್ಯರು ವಾಯಿಸರಾಯರಿಗೆ ಒಂದು ದೀರ್ಘ ಮನವಿ ಕಳಿಸಿ ಉತ್ತರ ಮತ್ತು ಪಶ್ಚಿಮ ಬಂಗಾಲದ ಭಾಗಗಳ ಒಂದು ಪ್ರತ್ಯೇಕ ಪ್ರಾಂತವನ್ನು ಹಿಂದೀ ಒಕ್ಕೂಟದ ಕೆಳಗೆ ರಚಿಸಬೇಕೆಂದು ಸೂಚಿಸಿದ್ದಾರೆ. ಹಿಂದೂ ಮಹಾ ಸಭೆಯೂ ಪಶ್ಚಿಮ ಬಂಗಾಲದಲ್ಲಿ ಈ ಬಗ್ಗೆ ಪ್ರಬಲ ಚಳವಳಿ ಹೂಡಿದೆ.

## ನರೇಂದ್ರರ ಆಟ

ಈ ನಡುವೆ ಬ್ರಿಟಿಶ್ ಹಿಂದುಸ್ತಾನದಲ್ಲಿ ನಡೆದಿರುವ ಈ ಕಚ್ಚಾಟವನ್ನು ನೋಡುತ್ತ ಸುಡುವ ಬಣವಿಯಿಂದ ಆರಳು ಆರಿಸುವ ಕೆಲಸದಲ್ಲಿ ನರೇಂದ್ರರು ನಿರತರಾದಂತಿದೆ. ಸಂಸ್ಥಾನಗಳ ವತಿಯಿಂದ ಘಟನಾ ಸಮಿತಿಯ ವಿವಿಧ ಸಮಿತಿಗಳಲ್ಲಿ ಭಾಗ ವಹಿಸಲು ಪ್ರತಿನಿಧಿಗಳನ್ನು ಕಳಿಸಬೇಕೆಂದು ನರೇಂದ್ರ ಮಂಡಲದ ಅಧ್ಯಕ್ಷರಾದ ಭೋಪಾಲ ನವಾಬರಿಗೆ ಘಟನಾ ಸಮಿತಿಯ ಅಧ್ಯಕ್ಷರಿಂದ ಆಮಂತ್ರಣ ಬಂದಾಗ ಅವರು ಅದನ್ನು ನಿರಾಕರಿಸಿ "ಮೂಲಭೂತ ಪ್ರಶ್ನೆಗಳು" ಇನ್ನೂ ಅನಿಶ್ಚಿತವಾಗಿರುವದರಿಂದ ಪ್ರತಿನಿಧಿಗಳನ್ನು ಕಳಿಸಲಾರವೆಂದು ತಿಳಿಸಿದರು. ಆದರೆ ಪ್ರತಿಗಾಮಿ ನರೇಂದ್ರರ ಶಕ್ತಿ ದಿನ ದಿನಕ್ಕೆ ಕುಂದುತಿದೆ. ಬಡೋದೆ, ಉದಯಪುರ, ಜಯಪುರ, ಜೋಧಪುರ, ಪತಿಯಾಲಾ, ರೇವಾ ಮತ್ತು ಬಿಕಾನೇರ ಸಂಸ್ಥಾನಗಳು ಈಗಾಗಲೆ ತಮ್ಮ ಪ್ರತಿನಿಧಿಗಳನ್ನು ಘಟನಾ ಸಮಿತಿಗೆ ಕಳಿಸಲೊಪ್ಪಿವೆ. ಬಡೋದೆಯ ಮುಂದಾಳ್ತನವನ್ನು ಎಲ್ಲ ನರೇಂದ್ರರು ಅನುಸರಿಸಬೇಕೆಂದು ಸರದಾರ ಪಟೇಲರು ಪ್ರಾರ್ಥಿಸಿದ್ದಾರೆ. ಮೇಲೆ ಹೇಳಿದ ೭ ಸಂಸ್ಥಾನಗಳು "ಪಾಕಿಸ್ತಾನ" ಪ್ರಾಂತದ ಸುತ್ತ ಮುತ್ತ ಇರುವದು ಕೌತುಕಪ್ರದವಾಗಿದೆ.

### ಗಾಂಧಿ ಜಿನ್ನಾರವರ ಸಂಯುಕ್ತ ಪ್ರಕಟನೆ

ವ್ಹಾಯಿಸರಾಯರ ಉಪಕ್ರಮದ ಮೇರೆಗೆ ಮಹಾತ್ಮಾ ಗಾಂಧಿ ಹಾಗು ಜಿನ್ನಾರವರು ಒಂದು ಸಂಯುಕ್ತ ಪ್ರಕಟನೆ ಹೊರಡಿಸಿ ಹಿಂಸೆಯನ್ನು ಖಂಡಿಸಿದ್ದಾರೆಂದು ವ್ಹಾಯಿಸರಾಯ ಭವನದಿಂದ ಇಂದು ಒಂದು ಪ್ರಕಟನೆ ಹೊರಟಿದೆ.

ವ್ಹಾಯಿಸರಾಯರ ಉಪಕ್ರಮ ಹಾಗು ವಿಶೇಷ ವಿನಂತಿ ಮೇರೆಗೆ ಶ್ರೀ ಗಾಂಧಿ ಹಾಗು ಶ್ರೀ ಜಿನ್ನಾರವರು ಕೆಳಗಿನ ಘೋಷಣೆಗೆ ಸಹಿ ಹಾಕಿ ಅದನ್ನು ಪ್ರಸಿದ್ಧಿಸಲು ಅಧಿಕಾರ ಕೊಟ್ಟಿರುವರು.

"ಹಿಂದುಸ್ತಾನದ ಒಳ್ಳೆ ಹೆಸರು ಕೆಡಿಸಿ ಅದಕ್ಕೆ ಕಲಂಕವನ್ನು ತಂದ ಹಾಗು ನಿರಪರಾಧಿ ಜನರಿಗೆ ಹೆಚ್ಚಿನ ಸಂಕಷ್ಟಗಳನ್ನು ಉಂಟು ಮಾಡಿದ ಇತ್ತೀಚಿನ ಪುಂಡಾಟಿಕೆ ಹಾಗು ಹಿಂಸೆಯ ಕೃತ್ಯಗಳನ್ನು ನಾವು ಅವುಗಳನ್ನು ಎಸಗಿದವರು; ಹಾಗು ಅವುಗಳಿಗೆ ಆಹುತಿಯಾದವರು ಯಾರೇ ಇದ್ದರೂ ಬಲವಾಗಿ ಖಂಡಿಸುತ್ತೇವೆ.

"ರಾಜಕೀಯ ಗುರಿ ಸಾಧಿಸಿಕೊಳ್ಳಲು ಹಿಂಸೆಯನ್ನು ಉಪಯೋಗಿಸುವದು ಯಾವಾಗಲೂ ಖಂಡನೀಯವಾಗಿರುವದೆಂದು ನಮ್ಮ ಅಭಿಪ್ರಾಯವಿದೆ. ಹಿಂದುಸ್ತಾನದ ಎಲ್ಲ ಸಮಾಜಗಳಿಗೆ ನಾವು ಅವರು ಯಾವದೇ ಒಲವಿನವರಿರಲಿ ಹಿಂಸೆ ಹಾಗು ಅಶಾಂತಿಯ ಕೃತ್ಯಗಳಿಂದ ದೂರ ಇರಲು ಕೇಳಿಕೊಳ್ಳುವ ಭಾಷಣ ಹಾಗು ಲೇಖನಗಳಿಂದಲೂ ಹಿಂಸೆ ಹಾಗು ಅಶಾಂತಿಯನ್ನು ಪ್ರಚೋದಿಸದಿರಲು ಕೇಳುವೆವು."

# ಅಂತರರಾಷ್ಟ್ರೀಯ

## ವಿದೇಶ ಮಂತ್ರಿಗಳ ಬಿಕ್ಕಟ್ಟು

ಮಾಸ್ಕೋದಲ್ಲಿ ಜರ್ಮನಿ—ಆಸ್ಟ್ರಿಯಾಗಳ ಭವಿತವ್ಯ ನಿರ್ಣಯಕ್ಕಾಗಿ ಸೇರಿದ ವಿದೇಶ ಮಂತ್ರಿಗಳ ಪರಿಷತ್ತು ಈಗ ನಾಲ್ಕು ವಾರಗಳಿಂದಯಾವುದೊಂದು ಪ್ರಮುಖ ವಿಷಯದಲ್ಲೂ ಒಮ್ಮತಕ್ಕೆ ಬರಲಾರದೆ ಹೋದದ್ದು ವಿದೇಶ ಮಂತ್ರಿಗಳಲ್ಲಿ ಒಬ್ಬೊಬ್ಬರಿಗೆ ನಿರಾಶೆಗೆ ಕಾರಣವಾಗಿದೆ. "ನಾವು ಮಾಸ್ಕೋಕ್ಕೆ ಬಂದು ವಾರ ನಾಲ್ಕು ಕಳೆದು ಹೋಯಿತು. ಇನ್ನೂ ಏನೂ ಮಾಡೇ ಇಲ್ಲ" ಎಂದು ಬ್ರಿಟಿಶ ವಿದೇಶಮಂತ್ರಿ ಬೆವಿನ್ನರು ನಿಟ್ಟುಸಿರುಗರೆದರು. ಹೊಸ ಹೊಸ ಯೋಜನೆಗಳು ಒಬ್ಬರಲ್ಲಒಬ್ಬರಿಂದ ಮುಂದೆತರಲ್ಪಡುತ್ತಿವೆ, ಒಬ್ಬರಲ್ಲ ಒಬ್ಬರು ಅದನ್ನು ವಿರೋಧಿಸುತ್ತಾರೆ ಮತ್ತು ಆ ಪ್ರಶ್ನೆಯಲ್ಲಿ "ಪೂರ್ಣ ಬಿಕ್ಕಟ್ಟು" ಉತ್ಪನ್ನವಾಯಿತೆಂದು ಕಾರ್ಯಕ್ರಮದ ಆ ವಿಷಯವನ್ನು ಅಷ್ಟಕ್ಕೇ ಬಿಟ್ಟು ಮುಂದೆ ಸಾಗುತಿದ್ದಾರೆ.

❋ ಅಮೇರಿಕನ್ ವಿದೇಶ ಮಂತ್ರಿ ಜನರಲ್ ಮಾರ್ಶಲ್ಲರು ಜರ್ಮನ್ ಗಡಿಗಳ ಪ್ರಶ್ನೆಯನ್ನು ಪುನಃ ಎತ್ತಿದರು. ಯಾಲ್ಟಾ ಒಪ್ಪಂದದನ್ವಯ ಪೋಲಂಡಿನಿಂದ ಕರ್ಜನ್ ಗಡಿಯ ಪೂರ್ವಕ್ಕಿರುವ ಭಾಗ ರಶಿಯಾಕ್ಕೆ ಸೇರಿಸಲ್ಪಟ್ಟು ಇದರಿಂದ ಪೋಲಂಡಿಗೊದಗಿದ ಹಾನಿಯನ್ನು ತುಂಬಲು ಪೂರ್ವ ಜರ್ಮನಿ ಮತ್ತು ಪೂರ್ವ ಪ್ರಶಿ



ಅಂಗ್ಲೋ-ಫ್ರೆಂಚ ೫೦ ವರ್ಷದ ಒಡಂಬಡಿಕೆಗೆ ಬಿಡಾಲ ಬೆವಿನ್ನರು ಸಹಿ ಹಾಕುವದು

ಯಾದ ಭಾಗಗಳನ್ನು ಪೋಲಂಡಿನ ವಶಕ್ಕೆ ಕೊಡಲಾಗಿತ್ತು. ಈಗ ಪೋಲಂಡಿಗೆ ಸೇರಿಸಲ್ಪಟ್ಟ ಜರ್ಮನ್ ಭಾಗದಲ್ಲಿ ಎಷ್ಟನ್ನು ಜರ್ಮನಿಗೆ ಬಿಟ್ಟು ಕೊಡಬೇಕು ಎಂಬದನ್ನು ಮತ್ತೆ ವಿಚಾರಿಸಬೇಕೆಂದು ಮಾರ್ಶಲರು ಕೇಳಿದ್ದಾರೆ. ಪೋಲಂಡಿಗೆ ಸೇರಿಸಲ್ಪಟ್ಟ ಭಾಗ ಬಹಳ ವಿಸ್ತಾರವಾಗಿದ್ದು ಜರ್ಮನಿಯು ಆಹಾರದಲ್ಲಿ ನೂರಕ್ಕಿಪ್ಪತ್ತರಷ್ಟನ್ನು ಅದು ಕಳೆದುಕೊಳ್ಳಬೇಕಾಗುವದರಿಂದ ಈ ಗಡಿಗಳ ಪುನರ್ವಿಮರ್ಶೆಯಾಗಬೇಕೆಂದು ಮಾರ್ಶಲ್‌ರ ವಾದ.

❋ ರಶಿಯನ್ ವಿದೇಶಮಂತ್ರಿ ಮೊಲಟೋವರು ಇದನ್ನು ಕಟುವಾಗಿ ವಿರೋಧಿಸಿದರು. ಜರ್ಮನಿಯಿಂದ ಕಿತ್ತು ಪೋಲಂಡಿಗೊಪ್ಪಿಸಲ್ಪಟ್ಟ ಭಾಗ ಪೋಲಂಡಿಗೇ ಶಾಶ್ವತವಾಗಿ ಯಲ್ಟಾ ಒಪ್ಪಂದದನ್ವಯ ಕೊಡಲ್ಪಟ್ಟಿತ್ತು. ಅದನ್ನು ಔಪಚಾರಿಕವಾಗಿ ಶಾಂತಿ ಒಪ್ಪಂದದಲ್ಲಿ ಸೇರಿಸುವದೊಂದೇ ಉಳಿದಿದೆ. ಈಗ ಅದನ್ನು ಪುನರ್ವಿಮರ್ಶಿಸುವ ಪ್ರಶ್ನೆಯೆ ಇಲ್ಲವೆಂದು ಅವರ ವಾದ.

❋ ಜಾರ್ಜ ಮಾರ್ಶಲರು ಜರ್ಮನಿಯನ್ನು ನಿಶ್ಶಸ್ತ್ರವಾಗಿರಿಸಲು ಚತುರ್ರಾಷ್ಟ್ರ ಒಪ್ಪಂದದ ಯೋಜನೆಯೊಂದನ್ನು ಮಂಡಿಸಿದರು. ಆದರೆ ಈಒಪ್ಪಂದದಲ್ಲಿಯುದ್ಧದಿಂದ ಮಿತ್ರರಿಗೊದಗಿದ ಹಾನಿಯ ಬಗ್ಗೆ ಜರ್ಮನಿ ಕೊಡಬೇಕಾದ ಪರಿಹಾರ, ಜರ್ಮನಿಯಲ್ಲಿ ಪ್ರಜಾತಂತ್ರವನ್ನು ಸ್ಥಾಪಿಸುವ ಬಗೆ, ಜಮೀನದಾರಿಗಳನಾಶ ಮೊದಲಾದ ಹಲವು ವಿಚಾರಗಳನ್ನು ಸೇರಿಸಬೇಕೆಂದು ಮೊಲಟೋವರು ಉಪಸೂಚನೆ ತಂದದ್ದರಿಂದ ಅದೂ "ಪರಿಪೂರ್ಣ ಬಿಕ್ಕಟ್ಟಿ" ನಲ್ಲೆ ಕೊನೆಗಂಡಿತು.

❋ ಜರ್ಮನಿಯ ಸಾರ್ ಪ್ರದೇಶವನ್ನು ಫ್ರಾನ್ಸಿಗೆ ಸೇರಿಸಿಬಿಡಬೇಕೆಂದು ಫ್ರೆಂಚ ವಿದೇಶ ಮಂತ್ರಿ ಬಿಡಾಲರು ಸೂಚಿಸಿದರು. ಇದಕ್ಕೆ ಅಂಗ್ಲೋ ಅಮೇರಿಕನ್ನರ ಬೆಂಬಲ ದೊರಕಿತು. ರಶಿಯನ್ನರ ಬೆಂಬಲವೂ ದೊರಕಲಡ್ಡಿಯಿದ್ದಿಲ್ಲವಾದರೂ ರೂಹ್ರ ಪ್ರದೇಶದಲ್ಲಿ ಚತುರ್ರಾಷ್ಟ್ರ ನಿಯಂತ್ರಣವನ್ನು ಸ್ಥಾಪಿಸಬೇಕೆಂಬ ರಶಿಯನ್ ಸೂಚನೆಗೆ ಫ್ರಾನ್ಸಿನ ಬೆಂಬಲ ದೊರಕುವ ವರೆಗೆ ಸಾರ ಪ್ರದೇಶದ ಫ್ರೆಂಚ ಆಕ್ರಮಣಕ್ಕೆ ಅವರು ಬೆಂಬಲವನ್ನು ತಡೆಹಿಡಿದಿದ್ದಾರೆ.

ಒಟ್ಟಿನ ಮೇಲೆ ಸಾರಾಂಶವಿಷ್ಟು: ರಶಿಯನ್ ಪ್ರಭಾವಕ್ಕೊಳಗಾದ ರಾಷ್ಟ್ರಗಳಿಗೆ ಯಾಲ್ಟಾ ಒಪ್ಪಂದದದಿಂದ ದೊರೆತ ಲಾಭಗಳನ್ನು ಕತ್ತರಿಸಿ ಜರ್ಮನಿಗೆ ಸವಲತ್ತು ತೋರಿಸಲು ಅಂಗ್ಲೋ ಅಮೇರಿಕನ್ನರು ಆತುರರಾಗಿದ್ದಾರೆ. ಜರ್ಮನ್ ಕಲ್ಲಿದ್ದಲಿ ಪ್ರದೇಶಗಳನ್ನು ನುಂಗಿಬಿಡಲು ಫ್ರೆಂಚರಿಗೆ ಅತೀವ ಆಸೆಯಾಗಿದೆ. ರಶಿಯನ್ನರಿಗೆ ಕೊಡಬೇಕಾದ ಪರಿಹಾರಕ್ಕೂ ಕತ್ತರಿ ಹಾಕಲು ಅಂಗ್ಲೋ ಅಮೇರಿಕನ್ನರು ಬಯಸುತ್ತಾರೆ. ರಶಿಯನ್ನರು ಇದಕ್ಕೆಲ್ಲ ಅಡ್ಡಿಯೊಡ್ಡಿದ್ದಾರೆ.

## ವಾಲೇಸರ ಶಾಂತಿ ಸೂತ್ರ

"ರಶಿಯಾದೊಡನೆ ಬಿಗಿಯಾಗಿ ವರ್ತಿಸಿರಿ" ಎಂಬ ಅಧ್ಯಕ್ಷ ಟ್ರೂಮನ್ನರ ಧೋರಣೆಯ ವಿರುದ್ಧ ದಂಗೆಯೆದ್ದು ತಮ್ಮ ವಾಣಿಜ್ಯ ಮಂತ್ರಿ ಪದಕ್ಕೆ ರಾಜೀನಾಮೆಯಿತ್ತು ಹೊರಬಿದ್ದ ಹಿಂದಿನ ಅಮೇರಿಕನ್ ಉಪಾಧ್ಯಕ್ಷರೂ ಈಗ ನ್ಯೂರಿಪಬ್ಲಿಕ್ ವಾರಪತ್ರಿಕೆಯ ಸಂಪಾದಕರೂ ಆದ ಹೆನ್ರಿ ವಾಲೇಸರು ಕಳೆದ ವಾರ ಇಂಗ್ಲಂಡಿಗೆ ಬಂದರು. ಅಮೇರಿಕೆಯ ರಶಿಯನ್ ಧೋರಣೆಯ ವಿರುದ್ಧ ಸ್ವದೇಶದಲ್ಲೆ ಜನಮತ ಸಂಘಟನೆ ನಡೆಸಿದ್ದ ಅವರೀಗ ತಮ್ಮ ಸಂದೇಶವನ್ನು ವಿದೇಶಗಳಲ್ಲೂ ಪ್ರಚುರ ಗೊಳಿಸಬಂದಿದ್ದಾರೆ. "ಮುಂಬರುವ ಕೆಲವೆ ವಾರಗಳಲ್ಲಿ ಯುದ್ಧಕ್ಕೆ ಕಾರಣವಾಗುವ ವಿದೇಶ ಧೋರಣೆಯೊಂದು ಅಮೇರಿಕೆಯಲ್ಲಿ ಸ್ಥಾಪಿತವಾಗಬಹುದು. ಇಂಥ ಧೋರಣೆ ಸ್ಥಾಪಿಸಲ್ಪಡುವದನ್ನು ತಡೆಯಲು ನನ್ನ ಕೈಲಾದುದನ್ನೆಲ್ಲ ಮಾಡುವವನಿದ್ದೇನೆ" ಎಂದು ಲಂಡನ್ನಿನಲ್ಲಿ ಸುದ್ದಿಗಾರ ಸಭೆಯೊಂದರಲ್ಲಿ ಅವರು ಕಳೆದವಾರ ಸಾರಿದರು. "ರಶಿಯಾ ವಿರೋಧಿ, ಕಮ್ಯುನಿಸ್ಟ ವಿರೋಧಿಗಳಾಗುವದರಿಂದ ನಮಗೇನೂ ಲಾಭವಿಲ್ಲ. ಅದರಿಂದ ಯುದ್ಧವೊಂದೇ ನಮಗೆ ಸಿಗಬಲ್ಲದು. ಆ ಯುದ್ಧದಲ್ಲಿ ನಮ್ಮ ಜೀವನ ಸಂಪ್ರದಾಯವೂ ಹಾಳಾಗುವದು. ರಶಿಯಾದೊಡನೆ ನಾವು ಒಡಂಬಡಿಕೆಗೆ ಬರಲಾರದೆ ಹೋದರೆ ಮೂರನೆ ಜಾಗತಿಕ ಯುದ್ಧ ಅನಿವಾರ್ಯವೆಂದು ನನಗೆ ತೋರುತ್ತದೆ" ರಶಿಯಾದ ಪುನರ್ನಿರ್ಮಾಣಕ್ಕಾಗಿ ಅಮೇರಿಕೆ ಆ ದೇಶಕ್ಕೆ ಹೇರಳ ಸಾಲಕೊಡಬೇಕೆಂದೂ ಗ್ರೀಸಿಗೂ ತುರ್ಕಿಗೂ ಧನಸಹಾಯ ಮಾಡಿದ್ದು ತಪ್ಪು, ಏಕೆಂದರೆ ಅದರಲ್ಲಿ "ಮದ್ದುಗುಂಡಿನ ನಾತ ತೀಕ್ಷ್ಣವಾಗಿದೆ" ಯೆಂದೂ ಅವರ ಅಭಿಪ್ರಾಯವಾಗಿತ್ತು.

"ಈ ಎರಡು ರಕ್ಕಸರು (ರಶಿಯಾ ಮತ್ತು ಅಮೇರಿಕಾ) ದಿನದಿನಕ್ಕೆ ಜೀವನ ಮರಣ ಹೋರಾಟವನ್ನು ಸಮೀಪಿಸುತಿದ್ದಾರೆ" ಎಂದು ಇನ್ನೊಂದು ಸಾರ್ವಜನಿಕ ಸಭೆಯಲ್ಲಿ ಅವರು ಹೇಳಿದರು. ಸೋವಿಯೆಟ್ ವಿರೋಧಿ ಸರಕಾರಗಳಿಗೆ ಅನಿರ್ಬಂಧ ಸಹಾಯವೀಯುವ ಅಮೇರಿಕನ್ ಅಧ್ಯಕ್ಷ ಟ್ರೂಮನ್ನರ ಧೋರಣೆಯಿಂದ ತಮಗೆ ಗಾಬರಿಯಾಗಿದೆ. ಇದರ ಬದಲು ಅಮೇರಿಕೆ ತನ್ನ ಔದಾರ್ಯವನ್ನು ಆಗ್ನೇಯ ಯುರೋಪಿನ ಜೀವನ ಮಟ್ಟವನ್ನು ಇಮ್ಮಡಿ ಏರಿಸಲು ಉಪಯೋಗಿಸಬಹುದು. ಕಮ್ಯೂನಿಝಂ ಎಂಬುದು ಬಡತನ, ಶೋಷಣೆಗಳನ್ನು ಕೊನೆಗೊಳಿಸುವ ಒಂದು ವಿಚಾರ. ಅದನ್ನು ಬ್ಯಾಂಕು ತುಪಾಕಿಗಳಿಂದ ನಾಶಮಾಡುವದು ಸಾಧ್ಯವಿಲ್ಲ. ಅಮೇರಿಕೆಯ ಅನಿರ್ಬಂಧ ವ್ಯಾಪಾರ ತತ್ವಕ್ಕೂ ಸೋವಿಯಟ್ ಕಮ್ಯೂನಿಝಂಗೂ ಮಧ್ಯವರ್ತಿಯಾಗಿ ಜಗತ್ತಿನ ಮುಂದಾಳ್ತನವನ್ನು ಇಂಗ್ಲಂಡು ವಹಿಸಬೇಕು ಎಂದವರು ವಿನಂತಿಸಿದರು.

ಮ್ಯಾಂಚೆಸ್ಟರದ ಇನ್ನೊಂದು ಪ್ರಚಂಡ ಸಭೆಯಲ್ಲಿ ಅವರು ಟ್ರೂಮನ್ ಧೋರಣೆಯನ್ನು ಇನ್ನಷ್ಟು ಉಗ್ರವಾಗಿ ಟೀಕಿಸಿ, ಅಮೇರಿಕನ್ ಸರಕಾರವೂ ಶಾಸನ ಸಭೆಗಳೂ ಇಂದು ಬಂಡವಲಗಾರಿಕೆ ಕಮ್ಯುನಿಜಂಗಳು ಜತೆಜತೆಯಾಗಿ ಶಾಂತಿಯಿಂದ ಬಾಳಲಾರವೆಂಬ ನಂಬಿಕೆಯುಳ್ಳವರ ಕೈಸೇರಿವೆಯೆಂದರು. ಫ್ಯಾಸಿಝಂ ವಿನಾಶದ ಯುದ್ಧದಲ್ಲಿ ರಶಿಯಾ ೨ ಕೋಟಿ ಜನರನ್ನು ಕಳೆದುಕೊಂಡದ್ದನ್ನು ಅವರು ಮರೆಯುತ್ತಾರೆ. ಗ್ರೀಸಿಗೆ ಕೊಟ್ಟ ೪೦ ಕೋಟಿ ಡಾಲರ ಸಹಾಯದಿಂದ ಕಮ್ಯುನಿಜಂದ ಬಾಯ್ಕಟ್ಟಿ ಮುಚ್ಚಿಸಲು ಸಾಧ್ಯವೆ? ಎಂದು ಕೇಳಿದರವರು.

ಅಮೇರಿಕನ್ ರಾಷ್ಟ್ರಕ್ಕೆ ಅವರು ಮಾಡಿದ ಆಕಾಶವಾಣಿ ಭಾಷಣದಲ್ಲಂತೂ ಅವರು ಕೆಲ ನೇರವಾದ ಪ್ರಶ್ನೆಗಳನ್ನು ಹಾಕಿದರು: ೧೯೪೭ ಮಾರ್ಚ ೧೨ ನೆ ತಾರೀಕಿನ ದಿನ ಅಮೇರಿಕನ್ನೇತಿಹಾಸದಲ್ಲೆ ಸಂಧಿಕಾಲ. ಅಂದು ಅಧ್ಯಕ್ಷ ಟ್ರೂಮನ್ನರು ಗಂಡಾಂತರವನ್ನೆದುರಿಸಲು ಸಿದ್ಧರಾಗಿರೆಂದು ಅಮೇರಿಕನ್ನರಿಗೆ ಎಚ್ಚರ ಕೊಟ್ಟರು. ಏನದು ಗಂಡಾಂತರ? ಇನ್ನೊಂದು ಪರ್ಲ ಹಾರ್ಬರ ಮರಂತವಾಯಿತೆ? ನಮ್ಮ ಪಕ್ಷದಲ್ಲಿ ಹೋರಾಡಿದವರಿಗೆ ಸಹಾಯ ಮಾಡಬೇಕೆಂದು ಅಧ್ಯಕ್ಷ ಟ್ರೂಮನ್ನರೆಂದುದು ನ್ಯಾಯ. ಪರೋಪಕಾರವೇ ನಮ್ಮ ಧ್ಯೇಯವಾಗಿದ್ದರೆ ಅಧ್ಯಕ್ಷ ಮಹಾಶಯರು ಯುಕ್ತರಾಷ್ಟ್ರ ಪರಿಹಾರ ಮತ್ತು ಪುನರ್ನಿಯೋಜನ ಸಮಿತಿಯ ಕೈಬಿಟ್ಟದ್ದೇಕೆ? ಯುರೋಪಿನ ನಿರಾಶ್ರಿತರಿಗೇಕೆ ನಾವು ಸಹಾಯ ಮಾಡುವದಿಲ್ಲ? ಯುದ್ಧದಲ್ಲಿ ಸೇರದಿದ್ದ ತುರ್ಕಿಗೇಕೆ ೧೫ಕೋಟಿ ಡಾಲರ ಸಹಾಯ? ತುರ್ಕಿಗೆ ಆಹಾರ ವಸ್ತ್ರದ ಕೊರತೆಯಾಗಿಲ್ಲವಲ್ಲ? ಧೀರ ಗ್ರೀಕ ಜನರಿಗೆ ಸಹಾಯ ಮಾಡಲು ನಾವು ಕೊಡಬೇಕೆಂದು ನಾವು ಸಾಹಸ್ಯ ಮಂತ್ರಿಯಾದಾಗ ಹೇಳಿದರೆ ಅಧ್ಯಕ್ಷರು ಕಾಂಗ್ರೆಸ ಸಭೆಯೂ ಕಿವಿಗೊಡಲಿಲ್ಲ. ಈಗ ಕೊಡುವ ೪೦ ಕೋಟಿ ಡಾಲರು ಕೂಡ ಆ ದೇಶದ ಜನತೆಯ ಪೂರ್ಣ ಉಪಯೋಗಿಸಲು ಬರದಿಲ್ಲೆಂದು ಟ್ರೂಮನ್ನರು ಹೇಳುತ್ತಾರೆ. ಗ್ರೀಸದ ಸರಕಾರ ಪ್ರಜಾಸತ್ತಾತ್ಮಕವೆಂದು ಹೇಳುವದು ಮರುಳತನ. ಗ್ರೀಕ ಸರಕಾರದಲ್ಲಿ ಅನೇಕ ಸುಧಾರಣೆಗಳಾಗಬೇಕೆಂದು ಸಾಲಕೊಡಬೇಕೆಂದು ವಿದೇಶಮಂತ್ರಿ ಮಾರ್ಶಲ್ಲರು ಹೇಳಿದರೂ ಅದನ್ನೇಕೆ ಟ್ರೂಮನ್ನರು ಹಚ್ಚಿಕೊಳ್ಳಲಿಲ್ಲ?... ಇತ್ಯಾದಿ.

ಟ್ರೂಮನ್ನರ ಸಾಮ್ರಾಜ್ಯವಾದಿ ಧೋರಣೆಗೆ ಒಳ್ಳೆ ತೀಕ್ಷ್ಣ ಪ್ರಶ್ನೆಗಳು ಇವು, ಆದರೆ ಕಮ್ಯುನಿಜಂ ವಿರುದ್ಧ ಪ್ರಚಾರದಿಂದ ಮತ್ತರವಾಗಿರುವ ಅಮೇರಿಕನ್ ಜನರು ಇದಕ್ಕೆ ಕಿವಿಗೊಡುವರೆ? ಅಮೇರಿಕೆಯ ಜೇಬಿನಲ್ಲಿರುವ ಅಣುಬಾಂಬು ಕೆಲಸ ಮಾಡಲು ಹಾತೊರೆಯುತಿದೆ...ಹೇಗೇ ಇದ್ದರೂ ವಾಲೇಸರ ಏರಾಟದಿಂದ ಟ್ರೂಮನ್ನರು ಪೇಚಿಗೆ ಬಿದ್ದಿದ್ದಾರೆ. ಅವರ ಪಾಸಪೋರ್ಟನ್ನು ರದ್ದುಮಾಡಿ ವಿದೇಶಗಳಲ್ಲಿ ಪ್ರಚಾರ ಮಾಡದಂತೆ ಬಾಯಿ ಮುಚ್ಚಿಸುವ ವಿಚಾರದಲ್ಲಿ ಅಧ್ಯಕ್ಷ ಟ್ರೂಮನ್ನರಿದ್ದಾರಂತೆ.

## ಬ್ರಿಟಿಶ ಮುಂಗಡ ಪತ್ರ

ಈ ವಾರ ಬ್ರಿಟಿಶ ಪಾರ್ಲಮೆಂಟಿನಲ್ಲಿ ಅರ್ಥಿಕ ಮಂತ್ರಿ ಹ್ಯೂ ಡಾಲ್ಟನ್ನರು ಮಂಡಿಸಿದ ಮುಂಗಡಪತ್ರ ಅನೇಕ ವಿಧದಿಂದ ರಾಷ್ಟ್ರಕ್ಕೆ ಸಮಾಧಾನವನ್ನುಂಟು ಮಾಡುವಂತಿತ್ತು. ಮೊದಲನೆಯದಾಗಿ ೧೯೪೭—೪೮ ರಲ್ಲಿ ಕೊರತೆಯ ಬದಲು ೨೪೮೦ ಲಕ್ಷ ಪೌಂಡ ಉಳಿತಾಯವನ್ನು ನಿರೀಕ್ಷಿಸಲಾಗಿದೆ. ಸದ್ಯ ವರ್ಷದಲ್ಲಾದರೂ ನಿರೀಕ್ಷಿಸಿದ್ದಕ್ಕಿಂತ ೧೫೬೦ ಲಕ್ಷ ಪೌಂಡ ಕಡಿಮೆ ಕೊರತೆ ಬಂದಿದೆ.

⊖ ಸಂರಕ್ಷಣ ವೆಚ್ಚ ನೂರಕ್ಕೆ ೪೬ ರಷ್ಟು ಕಡಿಮೆಯಾಗುವದು.

⊖ ಸುಧಾರಿಸಿದ ಪರಿಸ್ಥಿತಿಯನ್ನು ಲಕ್ಷಿಸಿ ಉತ್ಪನ್ನ ತೆರಿಗೆಯಲ್ಲಿ ಕೆಲ ಸವಲತ್ತು ಕೊಡಲಾಗುವದು. ಇದರಿಂದ ಈಗ ತೆರಿಗೆಗೆ ಗುರಿಯಾಗುತಿರುವವರಲ್ಲಿ ೬೫೦೦೦ ಜನರು ತೆರಿಗೆಯಿಂದ ಮುಕ್ತರಾಗುವರು.

⊖ ಆದರೆ ತಂಬಾಕದ ಆಯಾತ ತೆರಿಗೆಮಾತ್ರ ನೂರಕ್ಕೆ ೫೦ ರಷ್ಟು ಹೆಚ್ಚಲಿದೆ.

ಬ್ರಿಟನ್ನು ನಿರ್ಯಾತವನ್ನು ಹೆಚ್ಚಿಸಬೇಕೆಂದೂ ಅದಿಲ್ಲದೆ ಬದುಕುವದೇ ಅಸಾಧ್ಯವೆಂದೂ ಅರ್ಥಿಕ ಮಂತ್ರಿಗಳು ಎಚ್ಚರಿಕೆಯಿತ್ತರು.

## ಡಿಗಾಲೆಯ ಹೊಂಚು

ರಶಿಯಾ ವಿರೋಧಿ ಸರಕಾರಗಳಿಗೆ ಧನಸಹಾಯ ಮಾಡುವ ಅಮೇರಿಕೆಯ ಧೋರಣೆಯಿಂದ ಮತ್ತಾವ ದೇಶದಲ್ಲಿ ಅಷ್ಟು ವಿಶೇಷ ಪ್ರತಿಕ್ರಿಯೆಯಾಗಿಲ್ಲವಾದರೂ ಫ್ರಾನ್ಸದಲ್ಲಂತೂ ಆಗಿದೆಯೆಂದು ಡಿಗಾಲೆಯ ವರ್ತನೆಯಿಂದ ಸ್ಪಷ್ಟವಾಗುತ್ತದೆ. ರಾಜಕಾರಣದಿಂದ 'ನಿವೃತ್ತ'ನಾಗಿದ್ದ ಈ ಯುದ್ಧ ನಾಯಕ ಎರಡು ವಾರಗಳ ಕೆಳಗೆ ಮತ್ತೆ ಧೂಮಕೇತುವಿನಂತೆ ಉದಯವಾಗಲು ಟ್ರೂಮನ್ನರ ಹೊಸ ಧೋರಣೆಯೇ ಕಾರಣವಾಗಿರಬೇಕೆಂದು ಹೆನ್ರಿ ವಾಲೇಸರೂ ಒಪ್ಪಿದ್ದಾರೆ. ಹಿಟ್ಲರನ ನಾಜೀ ಪಕ್ಷದಂತೆ ಡಿಗಾಲೆ ಈಗ ಹೊಸದಾಗಿ ಸ್ಥಾಪಿಸಿರುವ "ಫ್ರೆಂಚ ಜನತಾಕೂಟ" ಎಂಬ ಪಕ್ಷದ ಉದಯ ಒಂದು ಬೀರ ಸೆಲರ (ಅಂದರೆ ಬೀರ ಮದ್ಯದಂಗಡಿ) ಯಲ್ಲೇ ಆರಂಭವಾಯಿತೆಂಬುದು ಕೌತುಕದ ಸಂಗತಿ. ಎಪ್ರಿಲ ೮ ಕ್ಕೆ ಅದನು ಸ್ಟ್ರಾಸ ಬರ್ಗದ ಬೀರ ಸೆಲ್ಲರಿನಲ್ಲಿ ನೆರೆಸಿದ ಸಭೆಯಲ್ಲಿ

— ೧೧ ನೇ ಪುಟಕ್ಕೆ



ಈಚೆಗೆ ಇಂಗ್ಲಂಡಿನಲ್ಲಿ ಒದಗಿದ ಹಿಮವರ್ಷದಲ್ಲಿ ಹಿಮರಾಶಿಯಲ್ಲಿ ಸಿಕ್ಕಬಿದ್ದ ಒಂದು ರೈಲು ಗಾಡಿ. ಕೆಲ ಹಬ್ಬಗಳು ಕೇಳಗುರುತಿವೆ

# ಸ್ವಾತಂತ್ರ್ಯ ಸೂರ್ಯೋದಯ ಸನ್ನಿಹಿತವಾದಾಗ ಎದೆಗುಂದೋಣ ಬೇಡ—

## ಕಾಂಗ್ರೆಸ್ಸಿಗರಿಗೆ ಸರದಾರ ಪಟೇಲರ ವಿನಂತಿ— ಸಾಮ್ಯವಾದಿಗಳಿಗೆ ಕಿವಿಮಾತು

ನಡುಗಾಲ ಸರಕಾರದ ಗೃಹ ಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು ಮುಂಬಯಿ ಪ್ರಾಂತಿಕ ಕಾಂಗ್ರೆಸ ಕಮೀಟಿ ಪರವಾಗಿ ಮುಂಬಯಿ ಚೌಪಾಟಿಯಲ್ಲಿ ಸಾರ್ವಜನಿಕ ಭಾಷಣ ಮಾಡುತ್ತ ಈಗ ಪರೀಕ್ಷೆಯ ಕಾಲ ಬಂದಿರುವದರಿಂದ ಕಾಂಗ್ರೆಸ ಜನರು ಪರಿಶ್ರಮ ಪೂರ್ವಕ ಹೆಣಗಾಡಿ ಕಾಂಗ್ರೆಸ ಸಂಸ್ಥೆಯನ್ನು ಬಲಪಡಿಸಿ ಬ್ರಿಟಿಶರು ಅಧಿಕಾರ ತ್ಯಾಗ ಮಾಡಿ ಹೊರಟು ಹೋದ ಕೂಡಲೆ ಉದ್ಭೂತವಾಗುವ ಪರಿಸ್ಥಿತಿಯನ್ನು ಎದುರಿಸಲು ಸಿದ್ಧರಾಗಬೇಕೆಂದು ಕೇಳಿಕೊಂಡರು.

ಬ್ರಿಟಿಶರು ನಮ್ಮ ದೇಶವನ್ನು ಬಿಟ್ಟು ಹೋದ ಮೇಲೆ ನಮ್ಮ ಗತಿ ಏನು ಎಂದು ಪ್ರತಿಯೊಬ್ಬರು ಕೇಳುತ್ತಿರುವರು. ಇಷ್ಟೇ ಅಲ್ಲದೆ ಕೆಲವರು ದೇಶದಿಂದ ಬ್ರಿಟಿಶರು ಹೊರಟುಹೋದ ಮೇಲೆ ದೇಶದಲ್ಲಿ ಅರಾಜಕತೆಯುಂಟಾಗುವದೆಂದು ಜನರಲ್ಲಿ ಅಂಜಿಕೆ ಹುಟ್ಟಿಸುವ ಪ್ರಯತ್ನ ನಡೆಸಿದ್ದಾರೆ. ಹಿಂದು ಮುಸಲ್ಮಾನ ಪ್ರಶ್ನೆಯು ಬಿಡಲಿ ಬಿಡದಿರಲಿ ೧೯೪೮ ಜೂನದೊಳಗಾಗಿ ಬ್ರಿಟಿಶರು ಅಧಿಕಾರ ತ್ಯಾಗ ಮಾಡಿ ಹೊರಟು ಹೋಗುವದು ಖಂಡಿತ. ಅದರಲ್ಲಿ ಯಾವ ಸಂಶಯವೂ ಇಲ್ಲ.

ಬ್ರಿಟಿಶ ಸಾಮ್ರಾಜ್ಯವಾದಿತ್ವದ ಶಕ್ತಿಯ ವಿರುದ್ಧ ಇಷ್ಟು ವರ್ಷಗಳ ವರೆಗೆ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕಾಂಗ್ರೆಸಿಗರು ಅಂಜಿಕೆಗೊಳಗಾಗಲು ಏನೂ ಕಾರಣವಿಲ್ಲ. ಪರಕೀಯ ಸತ್ತೆಯ ವಿರುದ್ಧ ಸಾಗಿಸಿದ ಹೋರಾಟದಲ್ಲಿ ಸ್ವಾರ್ಥತ್ಯಾಗ ಹಾಗು ಶೌರ್ಯದಿಂದ ಹೋರಾಡಿ ಕೀರ್ತಿ ಸಂಪಾದಿಸಿದ ಕಾಂಗ್ರೆಸ್ಸಿಗರು ಹಿಂದುಸ್ತಾನವನ್ನು ಬ್ರಿಟಿಶರು ಹಿಂದೀಯರಿಗೆ ಬಿಟ್ಟು ಹೋದಲ್ಲಿ ದೇಶದ ಗತಿಯೇನಾಗುವದೆಂದು ಚಿಂತಿಸುವದಾದರೂ ಏಕೆ? ಕಾಂಗ್ರೆಸ್ಸು ಮಾರ್ಗದಲ್ಲಿಯ ಎಲ್ಲ ಅಡಚಣಿಗಳನ್ನು ಎದುರಿಸಿ ಹಾಗು ಸಂಕಷ್ಟಗಳನ್ನು ಸಹಿಸಿ ಈಗ ತನ್ನ ಗುರಿ ಮುಟ್ಟಿರುವದು. ಬಹು ದಿನಗಳಿಂದ ಅಪೇಕ್ಷಿಸಿದ ಸ್ವಾತಂತ್ರ್ಯ ಸೂರ್ಯನು ಈಗ ಉದಯ ಹೊಂದುವದರಲ್ಲಿರುವನು. ಸ್ವರಾಜ್ಯ ಸೂರ್ಯನ ಈ ಉದಯವು ನಮ್ಮನ್ನು ಎದೆಗುಂದಿಸದೆ ನಮ್ಮ ಆಶೆಗಳನ್ನು ಬಲವತ್ತರಗೊಳಿಸಿ ಭವಿತವ್ಯವನ್ನು ನಿರ್ಧಾರದಿಂದ ಎದುರಿಸಲು ನಮ್ಮನ್ನು ಹುರಿದುಂಬಿಸಬೇಕು. ಭಾವೀ ಚಿತ್ರವು ಎಷ್ಟೇ ಅಂಧಕಾರಮಯ ಹಾಗು ಭೀಕರವಾಗಿದ್ದರೂ ಸ್ವತಂತ್ರ ರಾಷ್ಟ್ರದ ಪುನರ್ಜನ್ಮದಲ್ಲಿ ಉದ್ಭವಿಸುವ ಹೊಸ ಸಮಸ್ಯೆಗಳನ್ನು ಎದುರಿಸಲು ನಾವು ಸಿದ್ಧರಾಗಬೇಕು.

### ಹಿಂದು ಮುಸಲ್ಮಾನ ಸಮಸ್ಯೆ

ಲೀಗಿನೊಡನೆಯ ತನ್ನ ಮತಭೇದವನ್ನು ಕಾಂಗ್ರೆಸ್ಸು ಒಂದಿಲ್ಲೊಂದು ರೀತಿ ಈಗ ತೀರ್ಮಾನಿಸಿಕೊಳ್ಳುವ ಕಾಲವು ಬಂದಿದೆ. ನಮಗೆ ಅನ್ಯ ಮಾರ್ಗವುಳಿದಿಲ್ಲ. ನಮ್ಮ ದೇಶವನ್ನು ತುಂಡುಗಳನ್ನಾಗಿ ಕತ್ತರಿಸಿ ಆ ತುಂಡುಗಳ ಮೇಲೆ ಸಾರ್ವಭೌಮ ಅಧಿಕಾರ ಸ್ಥಾಪಿಸಬಯಸುವವರು ಮೂರ್ಖರ ಸಾಮ್ರಾಜ್ಯದಲ್ಲಿಯೆ ಇರುವರು. ಹಿಂದುಸ್ತಾನವನ್ನು ವಿಚ್ಛೇದಿಸ ಶಕ್ಯದ್ದಲ್ಲ. ಅದರಿಂದ ಹಿಂದುಗಳಿಗಾಗಲಿ ಮುಸಲ್ಮಾನರಿಗಾಗಲಿ ಯಾರಿಗೂ ಹಿತವಿಲ್ಲ. ಆದರೆ ಅದನ್ನು ವಿಚ್ಛೇದಿಸುವ ಪ್ರಸಂಗವೇ ಬಂದಲ್ಲಿ ನಮ್ಮ ನಮ್ಮಲ್ಲಿ ಪರಸ್ಪರ ಚರ್ಚೆಯಿಂದ ಹಾಗು ಶಾಂತ ರೀತಿಯಿಂದ ಅದನ್ನು ಮಾಡಬೇಕು. ಈ ಪ್ರಶ್ನೆಯು ಶಾಂತ ಹಾಗು ಸೌಹಾರ್ದ ರೀತಿಯಲ್ಲಿ ಬಿಡಿಸಲ್ಪಡದೆ ಹೋದರೆ ಹಿಂಸೆ ಹಾಗು ರಕ್ತಪಾತದ ಮಾರ್ಗವೊಂದೇ ಉಳಿಯುವದು ಅದರಿಂದ ಕೊಲೆ ಹಾಗು ನಾಶವೇ ಹೆಚ್ಚಾಗುವದರಿಂದ ಯಾರಿಗೂ ಹಿತವಿಲ್ಲ.

ಈ ಪ್ರಶ್ನೆಯನ್ನು ನಾವು ನಮ್ಮಲ್ಲಿ ಬಿಡಿಸಿಕೊಳ್ಳಲು ಶಕ್ತರಾಗದ ವರೆಗೆ ಯಾವದೇ ಪರಕೀಯ ಸರಕಾರವು ಎಷ್ಟೇ ಬಲಿಷ್ಠವಾಗಿದ್ದರೂ ದೇಶವನ್ನು ವಿಚ್ಛೇದಿಸಲು ಶಕ್ತವಾಗದು. ಅದ್ದರಿಂದ ಮುಸಲ್ಮಾನರು ಪಾಕಿಸ್ತಾನ ಹಾಗು ವಿಚ್ಛೇದನಕ್ಕಾಗಿ ಬ್ರಿಟಿಶರ ಮೋರೆ ನೋಡುತ್ತ ಕೂಡುವಲ್ಲಿ ಅರ್ಥವಿಲ್ಲ. ವಿಧಾಯಕ ಭಾವನೆಯಿಂದ ದೇಶಬಂಧುಗಳೊಡನೆ ಚರ್ಚೆ ಮಾಡಿ ಬಗೆಹರಿಸಿಕೊಳ್ಳಬೇಕು. ಜೂನ ೧೯೪೮ ರೊಳಗಾಗಿ ಬ್ರಿಟಿಶರು ಅಧಿಕಾರ ವರ್ಗಾಯಿಸಿ ಹೋಗುವದರಿಂದ ಆ ಬಗ್ಗೆ ಕಾಂಗ್ರೆಸ ಪ್ರತಿನಿಧಿಗಳೊಡನೆ ವಿಚಾರ ಮಾಡಲು ಲೀಗ ಪ್ರತಿನಿಧಿಗಳನ್ನು ಕಳಿಸಬೇಕೆಂದು ಕಾಂಗ್ರೆಸು ಲೀಗಿಗೆ ಕೊಟ್ಟ ಆಮಂತ್ರಣಕ್ಕೆ ಇನ್ನೂ ಲೀಗು ಉತ್ತರ ಕೊಟ್ಟಿಲ್ಲ. ಅದ್ದರಿಂದ ಅದು ಕಾಂಗ್ರೆಸಿನೊಡನೆಯ ಮತಭೇದವನ್ನು ಯಾವ ರೀತಿ ಬಗೆಹರಿಸಿಕೊಳ್ಳಲಿಚ್ಛಿಸುತ್ತದೆಂಬುದನ್ನು ಹೇಳುವದು ಶಕ್ಯವಿಲ್ಲ. ಆದರೆ ಅಷ್ಟರೊಳಗಾಗಿ ಮುಸಲ್ಮಾನರು ಹಾಗೂ ಹಿಂದುಗಳು ತಮ್ಮಲ್ಲಿಯ ಮತಭೇದ ಹೋಗಲಾಡಿಸಿಕೊಳ್ಳಲು ಶಕ್ತರಾಗಲಿ ಆಗದಿರಲಿ ಬ್ರಿಟಿಶರು ೧೯೪೮ ಜೂನದೊಳಗಾಗಿ ಹಿಂದೀಯರಿಗೆ ಅಧಿಕಾರ ವರ್ಗಾಯಿಸಿ ಹೋಗುವದು ಮಾತ್ರ ಖಂಡಿತವು.

### ಸಂಸ್ಥಾನಿಕರು

ಸಂಸ್ಥಾನಿಕರು ಸ್ವಚ್ಛಂದ ಅಧಿಕಾರವುಳ್ಳವರಾಗಿರುವರು. ಅವರು ಇಷ್ಟು ದಿವಸ ಬ್ರಿಟಿಶ ರಾಜ್ಯದ ಆಧಾರ ಸ್ತಂಭರಾಗಿದ್ದರು. ಈಗ ಸ್ವತಂತ್ರ ಹಿಂದುಸ್ತಾನದಲ್ಲಿ ಅವರು ತಮ್ಮ ಭವಿತವ್ಯ ನಿರ್ಣಯಿಸಿಕೊಳ್ಳುವ ಕಾಲವು ಬಂದಿರುವದು. ಅವರು ಹಿಂದು ಮುಸಲ್ಮಾನರ ಮತಭೇದದ ದುರುಪಯೋಗ ತೆಗೆದುಕೊಂಡು ಸ್ವಾರ್ಥಕ್ಕಾಗಿ ಪ್ರಯತ್ನಿಸಿದಲ್ಲಿ ಕೊನೆಗೆ ಅದು ಅವರಿಗೇ ಮುಳುವಾಗುವದು. ಘಟನಾ ಸಮಿತಿಯಿಂದ ಹೊರಗುಳಿದರೆ ಪರಿಸ್ಥಿತಿ ಏನಾಗುವದೆಂಬುದನ್ನು ಅವರು ಲಕ್ಷಿಸಲಿ. ಘಟನಾ ಸಮಿತಿಗೆ ಜನಸಂಖ್ಯೆಗನುಗುಣವಾಗಿ ಪ್ರತಿನಿಧಿಗಳನ್ನು ಕಳಿಸಲು ಅವರಿಗೆ ಹಕ್ಕು ಇದ್ದು ಜನರ ಪ್ರತಿನಿಧಿಗಳನ್ನೇ ಅವರು ಕಳಿಸಬೇಕು. ಸಂಸ್ಥಾನಗಳು ನಿರ್ಮೂಲವಾಗಬೇಕೆಂದು ನನ್ನ ಇಚ್ಛೆಯಿಲ್ಲ. ಆದರೆ ಈ ಸಮಯದಲ್ಲಿ ಅವರು ತಪ್ಪು ಹಾದಿ ಹಿಡಿದು ಹಿಂದು ಮುಸಲ್ಮಾನ ಮತಭೇದದ ದುರುಪಯೋಗ ಮಾಡಿಕೊಳ್ಳಲು ಪ್ರಯತ್ನಿಸಿದಲ್ಲಿ ಆತ್ಮಘಾತಕ ಧೋರಣ ಅನುಸರಿಸುವರೆಂದೂ ಅದರಲ್ಲಿ ಅವರ ವಿನಾಶವಿದೆಂದೂ ನಾನು ಹೇಳದೆ ಇರಲಾರೆ. ಘಟನಾ ಸಮಿತಿಯಲ್ಲಿ ಸೇರುವ ವಿಷಯದಲ್ಲಿ ಸಂಸ್ಥಾನಿಕರು ಹಿಂದೆ ಮುಂದೆ ನೋಡುವದು ಬೇಡ. ಯಾಕಂದರೆ ಅಲ್ಲಿ ಸಂಸ್ಥಾನಗಳ ಪ್ರಜೆಗಳಿಗೆ ಪ್ರಾತಿನಿಧ್ಯ ಕೊಡಲ್ಪಟ್ಟಿರುವದು. ಸಂಸ್ಥಾನಿಕರ ಇಚ್ಛೆಗೆ ಮಹತ್ವವಿಲ್ಲ. ಅದ್ದರಿಂದ ಅವರು ಘಟನಾ ಸಮಿತಿಯಲ್ಲಿ ಸೇರಿ ಸ್ವತಂತ್ರ ಹಿಂದುಸ್ತಾನದ ಘಟನೆ ಸಿದ್ಧಪಡಿಸುವಲ್ಲಿ ಸಹಾಯ ಮಾಡಬೇಕು.

### ಕಮ್ಯುನಿಷ್ಟರು ಹೆಸರು ಕೆಡಿಸುವರು

ಕಮ್ಯುನಿಷ್ಟರು ಇಂದು ನಮ್ಮಲ್ಲಿ ಒಡಕು ಹುಟ್ಟಿಸುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಅವರ ಧೈರ್ಯ ಸ್ವಾರ್ಥತ್ಯಾಗ ಹಾಗು ಉತ್ಸಾಹ ಪ್ರಶಂಸನೀಯವಿರುವವು. ಆದರೆ ಅವರು ಈ ಎಲ್ಲ ಉತ್ಸಾಹವನ್ನು ಯಾವ ರೀತಿ ಹಾಳು ಮಾಡಿಕೊಳ್ಳುತ್ತಿರುವರು ನೋಡಿರಿ. ಕಾಂಗ್ರೆಸ್ಸನ್ನು ದುರ್ಬಲಗೊಳಿಸಲು ಅವರು ಚಟುವಟಿಕೆಗಳನ್ನು ಸುರುವು ಮಾಡಿದ್ದರಿಂದ ಅವರನ್ನು ಕಾಂಗ್ರೆಸ್ಸಿನಿಂದ ಹೊರಗೆ ಹಾಕಬೇಕಾಯಿತು. ಈಗ ಅವರು ಎಲ್ಲೆಲ್ಲಿಯೂ ಸಂಪು ಹಾಗು ಗಲಭೆಗಳನ್ನು ಪ್ರಚೋದಿಸುವಲ್ಲಿ ನಿರತರಾಗಿದ್ದಾರೆ. ಕಾಂಗ್ರೆಸ್ಸು ಅನೇಕ ಪ್ರಾಂತಗಳಲ್ಲಿ ಅಧಿಕಾರ ವಹಿಸಿದಂದಿನಿಂದ ಅದರ ಕೀರ್ತಿಯನ್ನು ಕೆಡಿಸುವದು ಈಗ ಅವರ ಕಾರ್ಯವಾಗಿದೆ. ಔದ್ಯೋಗಿಕ ಸಂಪು ಹಾಗು ಗಲಭೆಗಳಿಂದ ಯಾರಿಗೆ ಹಿತವಿದೆ ಎಂಬುದನ್ನು ಅವರು ಮುಂದೆ ಬಂದು ಹೇಳುವರೆ? ಬಟ್ಟೆ ಹಾಗು ಉಳಿದ ನಿತ್ಯೋಪಯೋಗಿ ಸಾಮಾನುಗಳ ಕೊರತೆಯಿಂದ ಬಳಲುತ್ತಿರುವ ಜನಸಾಮಾನ್ಯರ ಸಂಕಷ್ಟ ಹಾಗು ವೇದನೆಗಳನ್ನೆ ಅವರು ಹೆಚ್ಚಿಸುವದಿಲ್ಲವೇ?

ಬಿಹಾರದಲ್ಲಿ ಇತ್ತೀಚೆಗೆ ಪೋಲೀಸರ ಸಂಪು ನಡೆಯಿತು. ಕಾಂಗ್ರೆಸ ಮಂತ್ರಿಮಂಡಳವು ಅಧಿಕಾರದಲ್ಲಿದ್ದ ಪ್ರಾಂತದ ಈ ಹಸಿಬಿಸಿ ಕ್ರಾಂತಿಕಾರಕರು ಪೋಲೀಸರನ್ನು ಸಂಪಿಗೆ ಪ್ರಚೋದಿಸುವಲ್ಲಿ ಯಾವ ಪುರುಷಾರ್ಥವಿದ್ದಿತು. ಕಾಂಗ್ರೆಸ ಮಂತ್ರಿಮಂಡಳವು ಬ್ರಿಟಿಶರಂತೆ ವರ್ತಿಸಿ ತಮ್ಮನ್ನು ನಿರ್ದಯದಿಂದ ಹತ್ತಿಕ್ಕುವದಿಲ್ಲೆಂಬ ಅರಿವಿನಿಂದಲೇ ಕಮ್ಯುನಿಷ್ಟರು ಹಾಗು ಇತರ ಎಡಪಕ್ಷದವರು ಪೋಲೀಸ ಹಾಗು ಇತರ ನೌಕರರಲ್ಲಿ ಅವಿಧೇಯತೆಯ ಬೀಜಬಿತ್ತಿ ಕಾಂಗ್ರೆಸ ಸಂಸ್ಥೆಯನ್ನು ದುರ್ಬಲಗೊಳಿಸುತ್ತಿರುವರಲ್ಲದೆ ಜಗತ್ತಿನಲ್ಲಿ ನಮ್ಮ ಹೆಸರು ಕೆಡಿಸುತ್ತಿರುವರು. ಅದೂ ೩೦೦ ವರ್ಷಗಳಿಂದ ನಮ್ಮ ಮೇಲೆ ಆಳುತ್ತಿದ್ದ ಬ್ರಿಟಿಶರು ಜೂನ ೧೯೪೮ ರೊಳಗಾಗಿ ಅಧಿಕಾರ ವರ್ಗಾಯಿಸಲಾಗುವದೆಂದು ಸಾರಿ ತಮ್ಮ ಪ್ರತಿಷ್ಠೆ ಬೆಳಸಿಕೊಂಡಾಗ ನಮ್ಮವರು ಈ ರೀತಿ ನಡೆಸಿರುವರು.

ಪರಕೀಯ ಸರಕಾರವಿದ್ದಾಗ ಹೀಗೆ ಮಾಡುವದು ಸರಿಯಾಗಿತ್ತು. ಆದರೆ ಈಗ ನಮ್ಮವರೇ ಅಧಿಕಾರದಲ್ಲಿರುವಾಗ ಮತ್ತು ಶಕ್ಯವಿದ್ದ ಜನಹಿತ ಕಾರ್ಯ ನಡೆಸಿರುವಾಗ ಈ ತರದ ಜಗಳ ಹಾಗು ಒಡಕಿಗೆ ಕಾರಣವಿಲ್ಲ.

### ಸಾಮ್ಯವಾದಿಗಳಿಗೆ

ಕಾಂಗ್ರೆಸ ಸಾಮ್ಯವಾದಿಗಳಿಗೂ ನಾನು ಈಗ ಅವರ ಪಕ್ಷದ ಹೆಸರು ಏನೇ ಇದ್ದರೂ ಅವರು ಮೊದಲಿನಿಂದ ಕೊನೆ ವರೆಗೆ ಕಾಂಗ್ರೆಸ್ಸಿಗರೇ ಇರುವರೆಂದೂ ಅವರ ಪ್ರಥಮ ಕರ್ತವ್ಯವು ಕಾಂಗ್ರೆಸ್ಸಿಗಾಗಿ ಇರುವದೆಂದೂ ನೆನಪು ಮಾಡಿ ಕೊಡಬಯಸುತ್ತೇನೆ. ಯಾಕಂದರೆ ಇಂದಿನ ಅವರ ಸ್ಥಾನಮಾನಗಳಿಗೆಲ್ಲ ಕಾಂಗ್ರೆಸ್ಸೇ ಕಾರಣವಿರುವದು. ಕಾಂಗ್ರೆಸದಲ್ಲಿದ್ದುಕೊಂಡು ಕೆಲಸ ಮಾಡಿಯೇ ಅವರು ದೇಶಸೇವೆ ಕಲಿತಿರುವರು. ಅವರು ಸ್ವಾತಂತ್ರ್ಯಕ್ಕಾಗಿ ಯಾವ ರೀತಿ ಸ್ವಾರ್ಥತ್ಯಾಗದಿಂದ ಹೋರಾಡಿದರೆಂಬುದು ನನಗೆ ಗೊತ್ತಿದೆ. ಆದರೆ ಗುಪ್ತವಾಗಿದ್ದುಕೊಂಡು ಕೆಲಸ ಮಾಡುವ ದಿನಗಳು ಈಗ ಇರುವದಿಲ್ಲವಾದ್ದರಿಂದ ಬೈಲಿಗೆ ಬಂದು ನನ್ನೊಡನೆ ಕಾರ್ಯ ಮಾಡಬೇಕೆಂದು ಅವರಿಗೆ ನಾನು ಕೇಳಿಕೊಳ್ಳುವೆನು. ಪರಕೀಯರನ್ನು ಹೊಡೆದೋಡಿಸುವ ವರೆಗೆ ತಡೆಯುವದು ಸಾಧ್ಯವಿಲ್ಲವೇ ಹೇಗೆ? ಇನ್ನು ಅದಕ್ಕೇನೂ ಬಹಳ ದಿನಗಳಿಲ್ಲ. ಕೇವಲ ೧೫ ತಿಂಗಳು ಉಳಿದಿರುವವು. ಸಾಮ್ಯವಾದಿಗಳನ್ನು ಕಾಂಗ್ರೆಸದಿಂದ ಹೊರಗೆಹಾಕುವ ಇಲ್ಲವೆ ಕಾಂಗ್ರೆಸದಿಂದ ಹೊರಬೀಳಲು ಅವರಿಗೆ ಕೇಳಿಕೊಳ್ಳುವ ಪ್ರಶ್ನೆ ಈಗ ಇಲ್ಲ. ಈ ಸಂಧಿಕಾಲದಲ್ಲಿ ಹಾಗು ಪರಕೀಯರನ್ನು ಹೊಡೆದೋಡಿಸುವ ಕಾರ್ಯದಲ್ಲಿ ಕಾಂಗ್ರೆಸಿನೊಡನೆಯ ಮತಭೇದ ಅಳಿಸಿ ಕಾಂಗ್ರೆಸಿನೊಂದಿಗೆ ಕೂಡಿಕೊಳ್ಳಲು ನಾನು ಅವರಿಗೆ ಕೇಳಿಕೊಳ್ಳುವೆನು. ಪರಕೀಯ ಅಧಿಕಾರವನ್ನು ಒಮ್ಮೆ ಹೊಡೆದೋಡಿಸಿದೆವೆಂದರೆ ಕಮ್ಯುನಿಷ್ಟರಿಗೂ ಸಾಮ್ಯವಾದಿಗಳಿಗೂ ತಮ್ಮ ಗುರಿ ಸಾಧಿಸಿಕೊಳ್ಳಲು ತಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಲು ಬರುವದು.

ಹಿಂದೀ ಕೂಲಿಕಾರರಿಗೆ ಪಂಚಾಯತಿ ಹಾಗು ಮಧ್ಯಸ್ಥಿಯ ಮಾರ್ಗ ಮುಕ್ತವಿದೆ. ಮಧ್ಯಸ್ಥರ ನಿರ್ಣಯವು ತಮ್ಮ ವಿರುದ್ಧ ಆದರೂ ಕೂಲಿಕಾರರು ಶಿಸ್ತಿನಿಂದ ಅದನ್ನು ಮಾನ್ಯ ಮಾಡಬೇಕು. ಅದರಲ್ಲಿಯೆ ಕೂಲಿಕಾರರ ನಿಜವಾದ ಹಿತವಿದ್ದು ಕೂಲಿಕಾರರ ನಿಜವಾದ ಧುರೀಣರು ಆ ಮಾರ್ಗದಲ್ಲಿಯೆ ಲಕ್ಷವನ್ನು ಕೇಂದ್ರೀಕರಿಸಬೇಕಲ್ಲದೆ ತಮ್ಮ ಬೇಡಿಕೆಗಳ ಹಟ ಹಿಡಿಯಬಾರದು.

ಕಾಂಗ್ರೆಸ್ಸಿಗರು ಅಧಿಕಾರಲಾಲಸೆ ಹಾಗು ಒಳಜಗಳಗಳನ್ನು ಇನ್ನು ಮುಗಿಸಿ ಕಾಂಗ್ರೆಸ್ಸನ್ನು ಬಲಪಡಿಸುವಲ್ಲಿ ತೊಡಗಬೇಕು. ಕಾಂಗ್ರೆಸ ಕಮೀಟಿಗಳು ಕಾಂಗ್ರೆಸ ಸರಕಾರಗಳೊಡನೆ ಹಾಗು ಕೇಂದ್ರದೊಡನೆ ಸಹಕರಿಸಿ ಕೆಲಸ ಮಾಡಬೇಕು. ಜನರ ಮೇಲಿನ ವರ್ಚಸ್ಸು ಉಳಿಸಿಕೊಂಡಲ್ಲಿ ಕಾಂಗ್ರೆಸ ಕಮೀಟಿಗಳಿಗೆ ಜನರ ಹಿತದ ಸಲುವಾಗಿ ಮಂತ್ರಿಮಂಡಳದ ಧೋರಣ ಬದಲಿಸುವದು ಸಹ ಶಕ್ಯವಾಗುವದು. ಹಿಂದು ಮುಸಲ್ಮಾನರೆಲ್ಲ ಒಟ್ಟಾಗಿ ಶಾಂತ ರೀತಿ ಸಾಗಿ ಸಕಲ ಸಂಪತ್ತಿನಿಂದ ಯುಕ್ತವಾದ ನಮ್ಮ ದೇಶವನ್ನು ಸುಖ ಸಮೃದ್ಧಿ ಹಾಗು ಕೀರ್ತಿಕಾರಕವಾದ ಹೊಸ ತಳಹದಿ ಮೇಲೆ ನಾವು ಕಟ್ಟುವಾ. ಸ್ವಾತಂತ್ರ್ಯದೊಂದಿಗೆ ಲಭಿಸುವ ಸಂಧಿಯನ್ನು ನಾವು ಸಾಧಿಸಿಕೊಳ್ಳುವದರಲ್ಲಿಯೇ ಜಗತ್ತಿನಲ್ಲಿ ಹಿಂದುಸ್ತಾನದ ಸ್ಥಾನಮಾನ ಅವಲಂಬಿಸಿದೆ ಮುಂತಾಗಿ ಅವರು ಹೇಳಿದರು.

---

ಸರ್ ಸಿದ್ದಪ್ಪಾ ಕಂಬಳಿಯವರು ಮೈಸೂರ ಸಂಸ್ಥಾನದ ದಿವಾಣರಾದ ಸರ್ ರಾಮಸ್ವಾಮಿ ಮುದ್ಲಿಯಾರರು ಹುಬ್ಬಳ್ಳಿಯಿಂದ ಬೇಗಳೂರಿಗೆ ಪ್ರಯಾಣ ಬೆಳಸುವಾಗ ಅವರೊಡನೆ ಗಾಡಿಯಲ್ಲಿ ಸಂಚರಿಸಿ ವಿಚಾರ ವಿನಿಮಯ ಮಾಡಿದರು. ಅವರು ಮೈಸೂರು ಸಂಸ್ಥಾನದಲ್ಲಿ ದೊಡ್ಡದೊಂದು ಹುದ್ದೆಯನ್ನು ಸ್ವೀಕರಿಸುವ ಸಂಭವವಿದೆಂದು ತಿಳಿಯುತ್ತದೆ.

### ಉರವಕೊಂಡ ಶ್ರೀಜಗದ್ಗುರುಗಳ ಮದ್ರಾಸ ಭೆಟ್ಟಿ

ಪ್ರಾಂತದಲ್ಲಿ ತೆಲಗು ತಮಿಳು ಭಾಷೆಗಳಿಗೆ ಇರುವ ಸ್ಥಾನವೇ ಕನ್ನಡಕ್ಕೂ ಸಹ ಇರಬೇಕೆಂದೂ ಅದನ್ನು ಪ್ರಾಂತದ ಒಂದು ಮುಖ್ಯ ಭಾಷೆಯೆಂದು ಗಮನಿಸಿ ಈಗ ಅದಕ್ಕಿರುವ ತೊಂದರೆಗಳನ್ನು ನಿವಾರಿಸಿ, ಸರಕಾರದಲ್ಲಿ ಇನ್ನು ಮುಂದೆ ಅದಕ್ಕೆ ಸೌಲಭ್ಯಗಳು ದೊರೆಯಬೇಕೆಂದೂ, ಈ ವಿಷಯದಲ್ಲಿ ಈಗಿನ ಮಂತ್ರಿಮಂಡಳದ ಧೋರಣ ಏನಿದೆ ಎಂಬುದನ್ನು ಸಮಕ್ಷಮ ತಿಳಿದು ಚರ್ಚಿಸಲು ಇದೇ ಸದಿ ನಾಲ್ಕನೆ ದಿನಾಂಕ ಬೆಳಿಗ್ಗೆ ಉರವಕೊಂಡ ಸಂಸ್ಥಾನ ಮಠದ ಶ್ರೀ ಜಗದ್ಗುರುಗಳು ಮದ್ರಾಸಿಗೆ ಭೆಟ್ಟಿ ಕೊಡಲಿರುವರು. ಮತ್ತು ಅದೇ ದಿನವೇ ಮುಖ್ಯ ಮಂತ್ರಿಗಳನ್ನೂ ಕಾಣಲಿರುವರೆಂದು ತಿಳಿಯುತ್ತದೆ.

---

ಕರ್ಮವೀರ ಹರಿಜನ ಪುರವಣಿ

# ಏಶಿಯದ ಸಂದೇಶ

೧೯೪೭ ನೇ ಏಪ್ರೇಲ ೨ನೇ ದಿನಾಂಕದಲ್ಲಿ ದಿಲ್ಲಿಯ ಪುರಾಣಾ ಕಿಲ್ಲೆಯಲ್ಲಿ ಬುಧವಾರ ದಿನ ಸೇರಿದ್ದ ಅಂತರ ಏಶಿಯ ಪರಿಷತ್ತಿನ ಸಮಾರೋಪಾಧಿವೇಶನವನ್ನುದ್ದೇಶಿಸಿ ಗಾಂಧೀಜಿಯವರು ಹೀಗೆ ಮಾತಾಡಿದರು.-

“ಪರದೇಶಿ ಭಾಷೆಯಲ್ಲಿ ನಾನು ಮಾತಾಡಬೇಕಾದುದಕ್ಕೆ ನಿಮ್ಮ ಕ್ಷಮೆಯನ್ನು ನಾನು ಕೋರುವ ಅಗತ್ಯವುಂಟೆಂದು ನನಗೆ ತೋರುವದಿಲ್ಲ. ವಿಶಾಲವಾದ ಈ ಜನಸಮುದಾಯದ ತುತ್ತತುದಿಯ ವರೆಗೆ ನನ್ನ ಧ್ವನಿಯನ್ನು ಈ ಧ್ವನಿವಾಹಕ ಯಂತ್ರವು ಮುಟ್ಟಿಸುವದೋ ಇಲ್ಲವೋ ನಾನರಿಯೆ. ದೂರವಿದ್ದ ಕೆಲವರಿಗೆ ನನ್ನ ಮಾತು ಕೇಳಿಸದಿದ್ದರೆ ಅದು ಧ್ವನಿವಾಹಕ ಯಂತ್ರದ ದೋಷ.

ನಿಮ್ಮ ಕ್ಷಮೆಯನ್ನು ಕೇಳಬಯಸುವದಿಲ್ಲೆಂದು ನಾನು ಹೇಳುವವನಿದ್ದೆ. ಆದರೆ ನನಗೆ ಧೈರ್ಯವೆನಿಸದು. ನನ್ನ ತಾಯ್ನುಡಿಯಾದ ನನ್ನ ಪ್ರಾಂತಿಕ ಭಾಷೆಯು ನಿಮಗೆ ತಿಳಿಯದು. ನನ್ನದೇ ನುಡಿಯಾದ ಗುಜರಾತಿಯಲ್ಲಿ ಮಾತಾಡಿ ನಿಮ್ಮನ್ನು ಅವಮಾನಗೊಳಿಸುವ ಇಚ್ಛೆ ನನಗಿಲ್ಲ. ಹಿಂದುಸ್ತಾನಿಯು ನಮ್ಮ ರಾಷ್ಟ್ರಭಾಷೆ. ಅದು ಅಂತರರಾಷ್ಟ್ರೀಯ ಭಾಷೆಯಾಗಬೇಕಾದರೆ ಇನ್ನೂ ಬಹುಕಾಲಬೇಕೆಂಬುದನ್ನು ನಾನು ಬಲ್ಲೆ. ಅಂತರರಾಷ್ಟ್ರೀಯ ವ್ಯವಹಾರಕ್ಕೆ ಅಂಗ್ಲಭಾಷೆಯು ಅಗ್ರಸ್ಥಾನವನ್ನು ಪಡೆವುದೆಂಬುದು ನಿಸ್ಸಂದೇಹ. ಫ್ರೆಂಚ ಭಾಷೆಯು ರಾಜತಂತ್ರದ ಭಾಷೆಯೆಂದು ನಾನು ಕೇಳುತಿದ್ದೆ. ನಾನು ಸಣ್ಣವನಿದ್ದಾಗ ಯುರೋಪದ ಒಂದು ತುದಿಯಿಂದ ಇನ್ನೊಂದು ತುದಿಗೆ ಹೋಗಬೇಕಾದರೆ ಫ್ರೆಂಚ ಭಾಷೆಯನ್ನು ನಾನು ಕಲಿಯಲೇಬೇಕೆಂದು ಹೇಳುತಿದ್ದರು. ಹೆರವರಿಗೆ ನನ್ನ ಮಾತಿನ ಅರ್ಥವಾಗಬೇಕೆಂದು ಫ್ರೆಂಚ ಭಾಷೆಯನ್ನು ಕಲಿಯಲು ಯತ್ನಿಸಿದೆ. ಫ್ರೆಂಚ ಮತ್ತು ಇಂಗ್ಲೀಷಿನ ನಡುವೆ ಸ್ಪರ್ಧೆಯಿದೆ. ಅಂಗ್ಲಭಾಷೆಯನ್ನು ನನಗೆ ಕಲಿಸಿರುವ ಮೂಲಕ ಅದೇ ಭಾಷೆಯನ್ನೇ ನಾನು ಸ್ವಾಭಾವಿಕವಾಗಿ ಆಶ್ರಯಿಸಬೇಕಾಗಿದೆ.

ನಿಮಗೆ ನಾನು ಏನು ಹೇಳಬೇಕೆಂದು ಅಲೋಚಿಸುತಿದ್ದೆ. ನನ್ನ ವಿಚಾರಗಳನ್ನೆಲ್ಲ ಕೂಡಿಸಬೇಕೆಂದಿದ್ದೆ. ಆದರೆ ನನಗೆ ಸಮಯವೇ ಸಿಕ್ಕಲಿಲ್ಲೆಂದು ಪ್ರಾಂಜಲವಾಗಿ ಒಪ್ಪಿಕೊಳ್ಳುವೆ. ಆದರೂ ನಿನ್ನೆ ಕೆಲವು ಮಾತುಗಳನ್ನು ಹೇಳಲು ಯತ್ನಿಸುವೆನೆಂದು ಮಾತು ಕೊಟ್ಟಿದ್ದೆ. ಬಾದಶಹಾಖಾನರ ಕೂಡ ಬರುತ್ತಿರುವಾಗ ಒಂದು ಸಣ್ಣ ಕಾಗದ ತುಣುಕನ್ನು ಹಾಗು ಸೀಸಕಡ್ಡಿಯನ್ನು ಬೇಡಿದೆ. ಸೀಸಕಡ್ಡಿಯ ಬದಲು ನನಗೆ ಮಸಿಕಡ್ಡಿಯು ದೊರಕಿತು. ಕೆಲ ಮಾತುಗಳನ್ನು ಗೀಚಲು ಪ್ರಯತ್ನಿಸಿದೆ. ನನಗೆ ಏನು ಹೇಳಬೇಕಾಗಿದ್ದಿತೆಂಬುದು ನೆನಪಿದ್ದರೂ ಆ ಕಾಗದದ ತುಣುಕು ಈಗ ನನ್ನ ಬಳಿಯಲ್ಲಿಲ್ಲೆಂಬುದನ್ನು ಕೇಳಿ ನಿಮಗೆ ವಿಷಾದವೆನಿಸಬಹುದು.

ಮಿತ್ರರೇ, ನಿಜವಾದ ಹಿಂದುಸ್ತಾನವನ್ನು ನೀವು ನೋಡಿಲ್ಲ. ನಿಜವಾದ ಹಿಂದುಸ್ತಾನದ ಮಧ್ಯದಲ್ಲಿ ನೀವು ಪರಿಷತ್ತಿನಲ್ಲಿ ನೆರೆದಿಲ್ಲ. ದಿಲ್ಲಿ ಲಾಹೋರ, ಮುಂಬಯಿ, ಮುದ್ರಾಸ, ಕಲಕತ್ತೆಗಳು ದೊಡ್ಡ ಪಟ್ಟಣಗಳಾದುದರಿಂದ ಪಾಶ್ಚಿಮಾತ್ಯರ ವರ್ಚಸ್ಸಿಗೊಳಗಾಗಿವೆ.

ಆ ಮೇಲೆ ಒಂದು ಕಥೆ ನನಗೆ ಹೊಳೆಯಿತು. ಅದು ಫ್ರೆಂಚ ಭಾಷೆಯಲ್ಲಿದ್ದಿತು. ಮತ್ತು ಅಂಗ್ಲ-ಫ್ರೆಂಚ ತತ್ವಜ್ಞಾನಿಯೊಬ್ಬನು ಅದರ ಅನುವಾದವನ್ನು ನನಗೆ ಹೇಳಿದನು. ಅತನು ನಿಸ್ವಾರ್ಥ ಮನುಷ್ಯನಿದ್ದನು. ಅವನಾವಾಗಲೂ ಅಲ್ಪಸಂಖ್ಯಾಕರ ಕೈವಾರಿಯಾಗಿದ್ದರಿಂದ ನನ್ನನ್ನರಿಯದೆ ಅವನು ನನ್ನ ಗೆಳೆತನ ಮಾಡಿಕೊಂಡನು. ನಾನಾಗ ನನ್ನ ದೇಶದಲ್ಲಿರಲಿಲ್ಲ. ಅತಿ ಕ್ಷುದ್ರ ಅಲ್ಪಸಂಖ್ಯಾಕ ವರ್ಗದಲ್ಲಿ ಮಾತ್ರ ನಾನಿದ್ದೆನಿಷ್ಟೇ ಅಲ್ಲದೆ ಅತಿ ತಿರಸ್ಕೃತ ಅಲ್ಪಸಂಖ್ಯಾಕ ವರ್ಗದಲ್ಲಿ ನಾನಿದ್ದೆ. ಹೀಗೆ ಹೇಳುವ ನನ್ನ ನುಡಿಯನ್ನು ದಕ್ಷಿಣ ಆಫ್ರಿಕೆಯಲ್ಲಿಯ ಯುರೋಪಿಯನ್ನರು ಕ್ಷಮಿಸಬೇಕು. ನಾನು ಕೂಲಿ ವಕೀಲನಾಗಿದ್ದೆ. ಆ ಕಾಲದಲ್ಲಿ ಕೂಲಿ ಡಾಕ್ಟರರಾಗಲಿ ಕೂಲಿ ವಕೀಲರಾಗಲಿ ಇದ್ದಿರಲಿಲ್ಲ. ನಾನೇ ಆ ಕ್ಷೇತ್ರದಲ್ಲಿ ಮೊದಲಿಗ. 'ಕೂಲಿ' ಶಬ್ದದ ಅರ್ಥವೇನೆಂಬುದು ನಿಮಗೆ ಗೊತ್ತಿರಬಹುದು.

ಈ ಮಿತ್ರನು-ಅತನ ತಾಯಿ ಫ್ರೆಂಚ ಸ್ತ್ರೀ ತಂದೆ ಅಂಗ್ಲೇಯ-ಹೀಗೆ ಹೇಳಿದನು:— “ನಿನಗಾಗಿ ಒಂದು ಫ್ರೆಂಚ ಕಥೆಯನ್ನು ಭಾಷಾಂತರಿಸಬೇಕೆಂದಿರುವೆ. ಮೂವರು ವಿಜ್ಞಾನಿಗಳಿದ್ದರು; ಸತ್ಯ ಶೋಧನಕ್ಕಾಗಿ ಅವರು ಫ್ರಾನ್ಸದಿಂದ ಹೊರಹೊರಟರು. ಏಶಿಯಾದ ಬೇರೆ ಬೇರೆ ಭಾಗಗಳಿಗೆ ಅವರು ಹೋದರು. ಅವರಲ್ಲೊಬ್ಬನು ಹಿಂದುಸ್ತಾನಕ್ಕೆ ಬಂದನು. ಸತ್ಯವನ್ನರಸಲು ಅವನಾರಂಭಿಸಿದ. ಆ ಕಾಲದ ನಗರಗಳಿಗೆ ಅವನು ಹೋದ. ಬ್ರಿಟಿಷರ ಬರುವಿಕೆಗಿಂತ, ಅದೇಕೆ? ಮೊಗಲರ ಕಾಲಕ್ಕಿಂತ ಮೊದಲಿನ ಕಥೆಯಿದು. ಉಚ್ಚವರ್ಗ ಗಂಡಸರನ್ನು ಹೆಂಗಸರನ್ನು-ಅವನು ಬ್ರುವ ಜನರನ್ನು—ದಿಙ್ಮೂಢವಾಗುವ ವರೆಗೆ ನೋಡಿದ. ಕೊನೆಗೆ ಅತನು ಒಂದು ಸಣ್ಣ ಹಳ್ಳಿಯಲ್ಲಿಯ ಒಂದು ಚಿಕ್ಕ ಗುಡಿಸಲಿಗೆ ಹೋದ. ಆ ಗುಡಿಸಲು ಭಂಗಿಯ ಗುಡಿಸಲಾಗಿದ್ದಿತು. ಅಲ್ಲಿ ಅವನು ಹುಡುಕುತಿದ್ದ ಸತ್ಯ ದೊರೆಯಿತು.”

ಹಿಂದುಸ್ತಾನದ ಹಿರಿಮೆಯನ್ನು ನೀವು ನೋಡಬೇಕಾದರೆ ಇಂತಹ ಹಳ್ಳಿಗಳ ಭಂಗಿಯ ಮನೆಗಳಲ್ಲಿ ನೀವು ಅದನ್ನು ಕಾಣಬೇಕು. ಇಂತಹ ಹಳ್ಳಿಗಳು ಏಳುಲಕ್ಷ ಇವೆ, ಮತ್ತು ೩೮ ಕೋಟಿ ಜನ ಅಲ್ಲಿ ವಾಸಿಸುತ್ತಾರೆ.

ನಿಮ್ಮಲ್ಲಿ ಕೆಲವರು ಹಳ್ಳಿಗಳನ್ನು ನೋಡಿದರೆ ಆ ದೃಶ್ಯವು ನಿಮ್ಮನ್ನು ಮುಗ್ಧಗೊಳಿಸಲಾರದು. ತಿಪ್ಪೆಯ ಬುಡವನ್ನು ನೀವು ಕೆದರಬೇಕಾಗುವದು. ಅವು ಎಂದಾದರೂ ಸ್ವರ್ಗಸಮಾನವಾಗಿದ್ದವೆಂದು ಹೇಳುವ ಸೋಗು ಮಾಡುವದಿಲ್ಲ. ಇಂದು ಅವು ನಿಜವಾಗಿ ತಿಪ್ಪೆಗಳಾಗಿವೆ. ಮೊದಲು ಅವು ಹೀಗೆ ಇರಲಿಲ್ಲ. ನಾನೀಗ ಹೇಳುತ್ತಿರುವದು ಇತಿಹಾಸದಿಂದಲ್ಲ; ಕಣ್ಣಾರೆ ನೋಡಿದ್ದುದು. ಹಿಂದುಸ್ತಾನದ ಒಂದು ತುದಿಯಿಂದ ಇನ್ನೊಂದು ತುದಿಯ ವರೆಗೆ ನಾನು ಸಂಚರಿಸಿದ್ದೇನೆ. ಮತ್ತು ನಿಸ್ತೇಜವಾದ ಕಣ್ಣುಗಳುಳ್ಳ ದೀನ, ದರಿದ್ರ ಮಾನವ ವರ್ಗವನ್ನು ನೋಡಿದ್ದೇನೆ. ಅವರೇ ಹಿಂದುಸ್ತಾನ. ಈ ಬಡ ಗುಡಿಸಲುಗಳಲ್ಲಿ, ಈ ತಿಪ್ಪೆಗಳ ಮಧ್ಯದಲ್ಲಿ ಬಡ ಭಂಗಿಗಳಿರುವರು. ಅಲ್ಲಿ ಬುದ್ಧಿವಂತಿಕೆಯ ಅರ್ಕವು ನಿಮಗೆ ದೊರೆವುದು.

ಅಂಗ್ಲ ಇತಿಹಾಸಕಾರರು ಬರೆದ ಪುಸ್ತಕಗಳಿಂದ ನಾನು ಕಲಿತಿದ್ದೇನೆ. ಅಂಗ್ಲ ಇತಿಹಾಸಕಾರರು ಅಂಗ್ಲ ಭಾಷೆಯಲ್ಲಿ ಬರೆದ ಪುಸ್ತಕಗಳನ್ನು ನಾವು ಓದುತ್ತೇವೆ. ಆದರೆ ನಮ್ಮ ತಾಯ್ನುಡಿಯಲ್ಲಿ ಇಲ್ಲವೆ ರಾಷ್ಟ್ರ ಭಾಷೆಯಾದ ಹಿಂದುಸ್ತಾನಿಯಲ್ಲಿ ಬರೆವುದಿಲ್ಲ. ಅಂಗ್ಲ ಪುಸ್ತಕಗಳ ಮುಖಾಂತರವೇ ನಾವು ಇತಿಹಾಸವನ್ನಭ್ಯಸಿಸುತ್ತೇವೆ. ಮೂಲ ಕಾಗದಪತ್ರಗಳನ್ನು ನೋಡುವದಿಲ್ಲ. ಹಿಂದುಸ್ತಾನವು ಅನುಭವಿಸುತ್ತಿರುವ ಸಾಂಸ್ಕೃತಿಕ ಪರಾಜಯವಿದು.

ಪೂರ್ವದಿಂದಲೇ ಪಶ್ಚಿಮಕ್ಕೆ ಜ್ಞಾನವು ಬಂದಿತೆಂದು ಹೇಳುತ್ತ ಗಾಂಧೀಜಿಯವರು ಹೀಗೆ ನುಡಿದರು. “ಈ ಜ್ಞಾನಿಗಳಲ್ಲಿ ಮೊದಲನೆಯವನು ಝೋರಾಸ್ಟರ. ಅವನು ಪೌರ್ವಾತ್ಯನೇ. ಆಮೇಲೆ ಬಂದವನು ಬುದ್ಧ—ಅವನೂ ಪೌರ್ವಾತ್ಯನೇ—ಹಿಂದುಸ್ತಾನದವನೇ. ಬುದ್ಧನ ತರುವಾಯ ಬಂದವನಾರು? ಪೂರ್ವದೇಶದಿಂದ ಬಂದವನೇ ಆದ ಯೇಸು. ಇಜಿಪ್ತದಲ್ಲಿ ಹುಟ್ಟಿದ್ದರೂ ಪಾಲಿಸ್ತಾನದವನಾದ ಮೋಜೆಸ್‌ನು ಯೇಸುವಿಗಿಂತ ಮುಂಚಿನವನು. ಯೇಸುವಿನ ನಂತರ ಮಹಮ್ಮದ. ಕೃಷ್ಣ, ರಾಮರೇ ಮೊದಲಾದ ಜ್ಯೋತಿಗಳನ್ನು ನಾನು ಇಲ್ಲಿ ಉಲ್ಲೇಖಿಸುವದಿಲ್ಲ. ಅವರು ಕಡಿಮೆ ತರಗತಿಯ ಜ್ಯೋತಿಗಳೆಂದು ಹೇಳುವದಿಲ್ಲ. ಆದರೆ ಸಾಹಿತ್ಯ ಜಗತ್ತಿಗೆ ಅವರ ಪರಿಚಯ ಕಡಿಮೆ. ಹೀಗಿದ್ದರೂ ಏಶಿಯಾದ ಈ ಜನರಿಗೆ ಸರಿಗಟ್ಟುವ ಒಬ್ಬ ವ್ಯಕ್ತಿಯೂ ನನಗೆ ಗೊತ್ತಿಲ್ಲ. ಆ ಮೇಲೆ ಮುಂದೇನಾಯ್ತು? ಪಶ್ಚಿಮಕ್ಕೆ ಕ್ರೈಸ್ತ ಮತವು ಹೋದ ಕೂಡಲೆ ಅದು ವಿದ್ರೂಪಗೊಂಡಿತು. ಹಾಗೆ ಹೇಳಬೇಕಾಗಿ ಬಂದುದಕ್ಕೆ ನನಗೆ ವ್ಯಸನವಾಗುತ್ತದೆ. ಹೆಚ್ಚಿಗೇನೂ ಹೇಳಬಯಸುವದಿಲ್ಲ.

ನಾನು ಆ ಕಥೆ ಹೇಳಿದ ಉದ್ದೇಶವೆಂದರೆ ದೊಡ್ಡ ಪಟ್ಟಣಗಳಲ್ಲಿ ನೀವು ನೋಡಿದ್ದುದು ನಿಜವಾದ ಹಿಂದುಸ್ತಾನವಲ್ಲೆಂದು ಹೇಳುವದು. ನಮ್ಮ ಕಣ್ಮುಂದೆಯೇ ನಡೆದ ಕೊಲೆಗಡಕತನವು ನಿಜವಾಗಿ ಲಜ್ಜಾಸ್ಪದ ವಿಷಯವೇ ಸರಿ. ನಿನ್ನೆ ಹೇಳಿದಂತೆ ಹಿಂದುಸ್ತಾನದ ಸೀಮೆಯ ಹೊರಗೆ ಆ ಕೊಲೆಗಡಕತನದ ನೆನಪನ್ನು ಕೂಡ ಒಯ್ಯಬೇಡಿರಿ.

ನೀವು ತಿಳಿದುಕೊಳ್ಳಬೇಕೆಂದು ನಾನು ಬಯಸಿದ್ದುದು ಏಶಿಯದ ಸಂದೇಶ. ಪಾಶ್ಚಿಮಾತ್ಯ ಕನ್ನಡಕಗಳಿಂದ ಅಥವಾ ಅಣುಶಕ್ತಿಯ ಅನುಕರಣದಿಂದ ಅದನ್ನು ಕಲಿಯಕೂಡದು. ಪಾಶ್ಚಾತ್ಯ ರಾಷ್ಟ್ರಗಳಿಗೆ ಸಂದೇಶವನ್ನು ನೀವು ಕೊಡಬೇಕಾದರೆ ಆ ಸಂದೇಶವು ಪ್ರೇಮ-ಸತ್ಯಗಳ ಸಂದೇಶವಾಗಿರತಕ್ಕದ್ದು. ನಿಮ್ಮ ಬುದ್ಧಿಗೆ (ತಲೆಗೆ) ಮಾತ್ರ ಮೊರೆಯಿಡುವ ಇಚ್ಛೆ ನನಗಿಲ್ಲ. ನಿಮ್ಮ ಹೃದಯವನ್ನು ಸೆರೆಹಿಡಿಯಬೇಕೆಂದಿರುವೆ.

ಪ್ರಜಾಪ್ರಭುತ್ವದ ಈ ಯುಗದಲ್ಲಿ ಬಡವರಲ್ಲಿ ಬಡವರು ಕೂಡ ಎಚ್ಚತ್ತಿರುವ ಈ ಯುಗದಲ್ಲಿ ಈ ಸಂದೇಶವನ್ನು ಒತ್ತಿ ಒತ್ತಿ ನೀವು ಹೇಳಬಹುದು. ನಿಮ್ಮ ಸುಲಿಗೆಯಾಗಿದೆಯೆಂಬ ಸೇಡಿನಿಂದ ಪಶ್ಚಿಮದ ಮೇಲಿನ ವಿಜಯವನ್ನು ನೀವು ದೊರಕಿಸಲಾರಿರಿ. ಆದರೆ ಅದನ್ನು ನಿಜವಾದ ತಿಳುವಳಿಕೆಯಿಂದ ಸಾಧಿಸಬಹುದು. ಪೂರ್ವದ ಜ್ಞಾನಿಗಳು ನಮಗಾಗಿ ಬಿಟ್ಟು ಹೋದ ಸಂದೇಶದ ಮರ್ಮವನ್ನು ತಿಳಿದುಕೊಳ್ಳಲು ನೀವೆಲ್ಲರು ನಿಮ್ಮ ಹೃದಯಗಳನ್ನು ತಲೆಗಳನ್ನಲ್ಲ-ಒಂದೆಡೆ ಇಟ್ಟರೆ ಮತ್ತು ಆ ದೊಡ್ಡ ಸಂದೇಶಕ್ಕೆ ನಾವೆಲ್ಲರೂ ಅರ್ಹರಾದರೆ ಪಶ್ಚಿಮದ ಮೇಲಿನ ವಿಜಯವು ಪೂರ್ಣವಾಗುವದು. ಈ ವಿಜಯವನ್ನು ಪಾಶ್ಚಿಮಾತ್ಯರೇ ಪ್ರೀತಿಸುವರು.

ಪಶ್ಚಿಮವೆಲ್ಲ ಇಂದು ಜ್ಞಾನಕ್ಕಾಗಿ ತವಕಿಸುತ್ತಿದೆ. ಅಣು ಬಾಂಬುಗಳ ಬೆಳವಣಿಗೆಯ ಬಗೆಗೆ ನಿರಾಶೆಯುಂಟಾಗಿದೆ. ಯಾಕಂದರೆ ಬೈಬಲ್ಲಿನ ಭವಿಷ್ಯವಾಣಿಯು ನಿಜವಾಗುವಂತೆ ಮತ್ತು ಪೂರ್ಣ ಪ್ರಳಯವಾಗುವಂತೆ ಅಣುಬಾಂಬುಗಳು ಜಗತ್ತನ್ನೆಲ್ಲ ನಾಶಗೊಳಿಸುವಂತೆ ತೋರುತ್ತದೆ. ದುಷ್ಟತನ ಪಾಪಗಳ ಬಗೆಗೆ ಜಗತ್ತಿಗೆಲ್ಲ ವಿದಿತಪಡಿಸುವದು ನಿಮ್ಮ ಕರ್ತವ್ಯ. ನಿಮ್ಮ ಗುರುಗಳು ಮತ್ತು ನನ್ನ ಗುರುಗಳು ಏಶಿಯಕ್ಕೆ ಕಲಿಸಿದ ದಾಯವಿದು.

## ಒಂದೇ ಜಗತ್ತಿಗಾಗಿ ಹೆಣಗಿರಿ

[ ದಿಲ್ಲಿಯಲ್ಲಿದ್ದಾಗ ಮಹಾತ್ಮಾಗಾಂಧಿಯವರು ಎರಡುಸಾರೆ ಏಶಿಯಾ ಪರಿಷತ್ತಿಗೆ ಹೋಗಿದ್ದರು. ಮಂಗಳವಾರ (ತಾ. ೧—೪—೪೭) ಅವರು ಮೊದಲನೇ ಸಾರೆ ಪರಿಷತ್ತಿಗೆ ಹೋದರು. ಅಗ ಅವರು ಭಾಷಣ ಮಾಡಲಿಲ್ಲ. ಆದರೆ ಕೆಲವು ಪ್ರತಿನಿಧಿಗಳು ಕೇಳಿದ ಪ್ರಶ್ನೆಗಳಿಗೆ ಉತ್ತರಕೊಟ್ಟರು. ಈ ಪ್ರಶ್ನೋತ್ತರಗಳನ್ನು ಕೆಳಗೆ ಕೊಡಲಾಗಿದೆ.

ಬಹಿರಂಗಾಧಿವೇಶನದ ಅಧ್ಯಕ್ಷಸ್ಥಾನದಲ್ಲಿದ್ದ ಅಝುರ ಬೈಜಾನದ ಪ್ರತಿನಿಧಿಗಳು ಮಹಾತ್ಮರಿಗೆ ನಾಲ್ಕು ಮಾತು ಹೇಳಬೇಕೆಂದು ಬಿನ್ನವಿಸಿದರು.

ಗಾಂಧೀಜಿಯವರು ಎಪ್ರಿಲ ೨ಕ್ಕೆ ಪರಿಷತ್ತಿನ ಕೊನೆಯ ಅಧಿವೇಶನಕ್ಕೆ ಬಂದಾಗ ಭಾಷಣ ಮಾಡುವೆನೆಂತಲೂ ಸದ್ಯಕ್ಕೆ ಯಾರಾದರೂ ಪ್ರಶ್ನೆಗಳನ್ನು ಕೇಳಿದರೆ ಉತ್ತರ ಕೊಡುವೆನೆಂದೂ ಹೇಳಿದರು.]

### ಕನಸು ನನಸಾಗಬಹುದು

ನೀವು ಒಂದೇ ಜಗತ್ತಿನ ತತ್ವಕ್ಕೆ ಒಪ್ಪುತ್ತೀರಾ? ಸದ್ಯದ ಪರಿಸ್ಥಿತಿಯಲ್ಲಿ ಅದು ಸಾಧ್ಯವಾಗಬಹುದೆ? ಎಂಬ ಪ್ರಶ್ನೆಗೆ ಗಾಂಧೀಜಿಯವರು ಈ ಉತ್ತರವನ್ನು ಕೊಟ್ಟರು, “ಈ ಜಗತ್ತು ಒಂದಾಗದಿದ್ದರೆ ಅದರಲ್ಲಿ ಇರಲು ನನಗೆ ಇಚ್ಛೆಯಿಲ್ಲ. ನನ್ನ ಜೀವಮಾನವಿರುವದರೊಳಗಾಗಿಯೇ ಈ ಕನಸು ನನಸಾಗಲಿ.

“ಇಲ್ಲಿ ನೆರೆದ ಏಶಿಯಾ ರಾಷ್ಟ್ರಗಳ ಪ್ರತಿನಿಧಿಗಳು ಒಂದೇ ಜಗತ್ತಿನ ನಿರ್ಮಾಣಕ್ಕಾಗಿ ಶಕ್ತಿ ಇದ್ದಷ್ಟು ಪ್ರಯತ್ನಿಸಬೇಕು; ಧ್ಯೇಯವನ್ನು ಸಾಧಿಸಲು ಅವರು ತಕ್ಕ ಉಪಾಯಗಳನ್ನು ಯೋಜಿಸಬೇಕು.

“ದೃಢ ನಿಶ್ಚಯದಿಂದ ನೀವೆಲ್ಲ ಕಾರ್ಯಕ್ಕೆ ತೊಡಗಿದರೆ ಇದೇ ತಲೆಮಾರಿನಲ್ಲಿಯೇ ಈ ಕನಸು ನನಸಾಗಬಹುದು.”

ಏಶಿಯಾ ಸಂಸ್ಥೆಯ ನಿರ್ಮಾಣದ ವಿಷಯವಾಗಿ ತಮ್ಮ ಅಭಿಪ್ರಾಯವನ್ನು ತಿಳಿಸಬೇಕೆಂದು ಚೀನದ ಡಾ. ಹಾನಲೀವುರವರು ಬಿನ್ನವಿಸಿದರು.

“ಗಾಂಧೀಜಿಯವರು ಕೆಳಗಿನ ಉತ್ತರವನ್ನು ಕೊಟ್ಟರು— ಅತ್ಯುತ್ತಮ ಪ್ರಶ್ನೆ ಹಾಕಿದಿರಿ. ನಾನು ನನ್ನ ಅಜ್ಞಾನವನ್ನು ಒಪ್ಪಿಕೊಳ್ಳಬೇಕು. ನಿಜವಾಗಿ ಇದರ ಬಗ್ಗೆ ನಾನು ನಿಮ್ಮ ಕ್ಷಮೆ ಬೇಡಬೇಕು. ಈ ಪರಿಷತ್ತು ನೆರೆಯುವದು ನಿಶ್ಚಯವಾಗುವದಕ್ಕಿಂತ ಮೊದಲು ಪಂಡಿತ ನೆಹರೂರವರು ನಾನು ಈ ಪರಿಷತ್ತಿಗೆ ಹಾಜರಿರಬಹುದೆ ಎಂದು ಕೇಳಿದ್ದರು. ನಿರೀಕ್ಷಿಸಿದಕ್ಕಿಂತ ಈ ಪರಿಷತ್ತಿಗೆ ಹೆಚ್ಚು ಮಹತ್ವವಿದೆಯೆಂಬುದು ಸಿದ್ಧವಾಯಿತು. ಆಗ ನನಗೆ ಬರಲಿಕ್ಕೆ ಆಗುವದಿಲ್ಲ ಕ್ಷಮಿಸಬೇಕು. ಎಂತಲೂ ನಾನು ತಿಳಿಸಬೇಕಾಯಿತು. ಆದರೆ ವೈಸರಾಯರಾದ ಲಾರ್ಡ ಮೌಂಟಬ್ಯಾಟನ್ನರು ಕರೆಕಳುಹಲು 'ಇಲ್ಲ' ವೆಂದು ಹೇಳಲು ನನಗೆ ಅಶಕ್ಯವಾಯಿತು. ಹಾಗೆ ಹೇಳುವದು ನನ್ನ ಸ್ವಭಾವವಲ್ಲ. ನನ್ನನ್ನು ಏಶಿಯಾ ಪರಿಷತ್ತಿನ ವೇಳೆಗೆ ದಿಲ್ಲಿಗೆ ಕರೆತಂದ ಗೌರವ ತಮಗೇ ಸಲ್ಲುವದೆಂದು ವೈಸರಾಯರು ಈಗಾಗಲೇ ನನಗೆ ಹೇಳಿದ್ದಾರೆ. ನಾನು ವೈಸರಾಯರಿಗೆ ಹೇಳಿದ್ದೇನಂದರೆ “ನಾನು ನಿಮ್ಮ ಸೆರೆಯಾಳು. ನಿಮ್ಮ ಉಪಾಧ್ಯಕ್ಷರಾಗಿರುವ ಪಂಡಿತ ನೆಹರೂರವರ ಬಂಧನದಲ್ಲಿಯೂ ನಾನಿದ್ದೇನೆ.”

ಪತ್ರವ್ಯವಹಾರದ ಮೂಲಕ ಜಗತ್ತಿನ ಎಲ್ಲ ಭಾಗಗಳ ಪರಿಚಯವು ನನಗಾಗಿದೆ. ಅಂತೆಯೇ ಏಶಿಯದ ಪರಿಚಯವು ಕೂಡ ಆಗಿದೆ. ಆದರೂ ನಿಮ್ಮೊಳಗಿನ ತೀರ ಸ್ವಲ್ಪ ಜನರ ವೈಯಕ್ತಿಕ ಪರಿಚಯವು ನನಗಿರಬಹುದು. ಇರಲಿಕ್ಕಿಲ್ಲ ಕೂಡ. ಈ ಪ್ರಶ್ನೆಯ ಬಗ್ಗೆ ಉಪಯುಕ್ತವಾದದ್ದನ್ನು ನಾನು ಹೇಳಬಹುದು ಅಥವಾ ಹೇಳಲಿಕ್ಕಿಲ್ಲ, ಆದರೆ ಪ್ರಶ್ನೆಯು ಮಾತ್ರ ನನ್ನ ಮನಸ್ಸಿಗೆ ಒಪ್ಪುವಂತಹದಿದೆ. ಈಗ ನನಗೆ ಕೇಳಲಾದ ಪ್ರಶ್ನೆಯ ಕೆಲ ಭಾಗವನ್ನು ನಿನ್ನೆ ಪಂಡಿತ ನೆಹರೂರವರು ಚರ್ಚಿಸಿದ್ದಾರೆ. ಇಂಥ ಪರಿಷತ್ತು ಈ ದೇಶದಲ್ಲಿ ನಡೆದುದು ಇತಿಹಾಸದಲ್ಲಿ ಇದೇ ಮೊದಲು. ಇದೊಂದು ದೊಡ್ಡ ಸಂಗತಿ.

ಸದ್ಯದ ಪರಿಸ್ಥಿತಿಯನ್ನು ನಾನು ಹೇಳಲೇಬೇಕಾಗಿದೆಂದ್ದು ನನಗೆ ವಿಷಾದವಾಗುತ್ತದೆ. ಹೇಗೆ ಕೂಡಿಕೊಂಡು ಶಾಂತಿಯಿಂದಿರಬೇಕೆಂಬುದು ನಮಗೆ ಗೊತ್ತಿಲ್ಲ. ನಮ್ಮ ನಮ್ಮಲ್ಲಿ ಎಷ್ಟೋ ಮತಭೇದಗಳಿವೆ. ಇವುಗಳನ್ನು ಸ್ನೇಹಭಾವದಿಂದ ಬಗೆಹರಿಸಿಕೊಳ್ಳುವದು ನಮ್ಮಿಂದಾಗಲೊಲ್ಲದು. ಪಶುನೀತಿಯ ಹೊರತು ಬೇರೆ ಮಾರ್ಗವಿಲ್ಲವೆಂದು ನಮಗನಿಸುತ್ತಿದೆ. ಈ ಸಂಗತಿಯನ್ನು ಮಾತ್ರ ನೀವು ಇಲ್ಲಿಯೇ ಹೂಳಿ ಹೋಗಬೇಕು. ನಿಮ್ಮೊಡನೆ ನಿಮ್ಮ ದೇಶಗಳಿಗೆ ಅದನ್ನು ಒಯ್ಯಬೇಡಿರಿ.

ಹಿಂದುಸ್ತಾನವು ಸ್ವಾತಂತ್ರ್ಯದ ಹೊಸ್ತಿಲದೊಳಗೆ ಕಾಲಿಟ್ಟದೆ, ಈ ದೇಶವನ್ನು ಆಳಲಿಚ್ಛಿಸುವವರೊಡನೆ ಹಿಂದುಸ್ತಾನವು ಸಂಬಂಧ ಕಡಿದುಕೊಳ್ಳಲಿಚ್ಛಿಸುತ್ತದೆ. ಕೇವಲ ಆಳುವವರ ಬದಲಾವಣೆ ನಮಗೆ ಬೇಡ. ನಮ್ಮ ದೇಶದಲ್ಲಿ ನಾವೇ ಆಳಬೇಕು. ಇದು ಹೇಗೆ ಕೈಗೂಡಬಹುದೆಂಬುದು ನಮಗಿನ್ನೂ ಸ್ಪಷ್ಟವಾಗಿಲ್ಲ.

ನಮ್ಮ ಕರ್ತವ್ಯವನ್ನು ನಾವು ಮಾಡಬೇಕೆಂಬುದಷ್ಟೇ ನಮಗೆ ಗೊತ್ತು. ಫಲಕೊಡುವದು ದೇವರ ಕೈಯಲ್ಲಿದೆ; ಮನುಷ್ಯರ ಕೈಯಲ್ಲಿಲ್ಲ. ಮನುಷ್ಯನ ಭಾಗ್ಯವು ಅವನ ಕೈಯಲ್ಲಿರುತ್ತದೆಂದು ತಿಳಿಯಲಾಗುತ್ತದೆ. ಕೆಲಮಟ್ಟಿಗೆ ಮಾತ್ರ ಇದು ಸತ್ಯವಿದೆ. ಮಹಾಶಕ್ತಿಯು ಅವನ ಯೋಜನೆಗಳನ್ನೆ ದಿಗೊತ್ತಿ ತನ್ನದೆ ತಾನು ಎಲ್ಲಿಯ ವರೆಗೆ ಸಾಧಿಸುವದಿಲ್ಲವೊ ಅಲ್ಲಿಯ ವರೆಗೆ ಮಾತ್ರ ಮನುಷ್ಯನು ತನ್ನ ಭಾಗ್ಯಾಧೀಶನು.

ಈ ಮಹಾಶಕ್ತಿಯನ್ನು ನಾನು ಅಲ್ಲಾ, ಖುದಾ, ಅಥವಾ ದೇವರು ಎಂಬ ಹೆಸರುಗಳಿಂದ ಕರೆಯುವದಿಲ್ಲ. ಅದಕ್ಕೆ ನಾನು ಸತ್ಯವೆಂದು ಅನ್ನುತ್ತೇನೆ. ಸತ್ಯವೇ ನನ್ನ ದೇವರು. ನಮ್ಮ ಎಲ್ಲ ಯೋಜನೆಗಳ ಮೇಲೆ ಅದರದೇ ಅಧಿಕಾರ. ಸಂಪೂರ್ಣ ಸತ್ಯವು ಆ ಸತ್ಯ-ಶಕ್ತಿಯ ಹೃದಯದಲ್ಲಿಯೇ ಮನೆಮಾಡಿಕೊಂಡಿದೆ. ಬಾಲ್ಯದಿಂದಲೂ ನಾನು ಸತ್ಯವು ದುಃಸಾಧ್ಯ ನಾವು ಸತ್ಯವನ್ನು ಮುಟ್ಟಲಾರೆವೆಂದು ಕಲಿತಿದ್ದೇವೆ. ಓವರ

—೯ನೇ ಪುಟಕ್ಕೆ

# ದಿಲ್ಲಿ ವಿಷ್ಕಂಭಕ

ಎಪ್ರಿಲ ೧, ೧೯೪೭

ದಿಲ್ಲಿಯಲ್ಲಿ ಮಂಗಳವಾರ ಪ್ರಾರ್ಥನಾ ಸಭೆಯಲ್ಲಿ ಒಬ್ಬ ಉದ್ವಿಗ್ನ ಹಿಂದೂ ತರುಣನು ಪ್ರಾರ್ಥನೆಯಲ್ಲಿ ಕುರಾಣದ ಶ್ಲೋಕಗಳನ್ನು ಪಠಿಸುವದಕ್ಕೆ ಆಕ್ಷೇಪವೆತ್ತಿದುದರಿಂದ ಗುಲ ಗೊಂದಲವಾಯಿತು. ಆ ಹುಡುಗನನ್ನು ಪ್ರಾರ್ಥನೆಯ ಬಯಲಿಂದ ಹೊರಗೆ ಕಳಿಸುವವರೆಗೆ ಸ್ವಲ್ಪ ಹೊತ್ತು ಗಾಂಧೀಜಿ ಪ್ರಾರ್ಥನೆಯನ್ನು ತಡೆಹಿಡಿದರು.

ಹುಡುಗನನ್ನು ಹೊರಗೆ ಕಳಿಸಿದಮೇಲೆ ಝುರತುಷ್ಟ ವಾಕ್ಯ, ಭಜನೆ, ರಾಮಧುನಿ ಸಹಿತವಾದ ಪೂರ್ಣ ಪ್ರಾರ್ಥನೆಯನ್ನು ಬದಲಿಸುವ ಕಾರಣವೇನೂ ಇಲ್ಲದಿದ್ದರೂ ಆತರುಣನಿಗೆ ಅವನಕಲ್ಪಿತ ವಿಜಯವೆಂದರೆ ಪೂರ್ಣ ಪ್ರಾರ್ಥನೆಯನ್ನು ಅಪೇಕ್ಷಿಸುತ್ತಿರುವ ಇತರ ಶ್ರೋತೃಗಣಕ್ಕೆ ನಷ್ಟವೆಂದು ಮನಗಾಣಿಸುವಗೋಸುಗ ತಾವು ಪ್ರಾರ್ಥನಾ ಸಭೆಯನ್ನು ವಿಸರ್ಜಿಸಿಬಿಡುವದಾಗಿ ಗಾಂಧೀಜಿ ಸಾರಿದರು. ಅವನ ಹಠ ಅಹಿಂದುತ್ವವಷ್ಟು ಮಾತ್ರವಲ್ಲ. ಸಾಮಾನ್ಯ ಸಭಾನಿಯಮಗಳ ಅವಿನೀತಿಪೂರ್ಣವಾದ ಉಲ್ಲಂಘನೆಯೂ ಆಗಿತ್ತು. ಆ ತರುಣನು ಮಾಡಿದ ಬಗೆಯ ಅವಿಚಾರದ ಕೃತಿಗಳ ಪರಿಣಾಮವಾಗಿಯೆ ನೌಖಾಲಿ, ಬಿಹಾರ, ಪಂಜಾಬಗಳಲ್ಲಿ ಕಂಡುಬಂದ ಒಂದನ್ನೊಂದು ಮೀರಿಸುವ ಅಮಾನುಷ ಕೃತ್ಯಗಳು ಜರಗಿದವು. ಜನರು ದೃಢ ನಿರ್ಧಾರದಿಂದ ಎಲ್ಲ ಪಾಶವತೆಯನ್ನು ತ್ಯಜಿಸಬೇಕಾದ ಕಾಲ ಬಂದಿದೆ.

ಬಿಹಾರದಲ್ಲಿ ಮುಸ್ಲಿಮರ ಮೇಲಾದ ಅತ್ಯಾಚಾರಗಳು ತಮಗೆ ತಿಳಿಸಲ್ಪಟ್ಟಾಗ ನೌಖಾಲಿಯಲ್ಲಿ ತಾವೆಂತು ನಾಚಿಕೆಯಿಂದ ತಲೆ ತಗ್ಗಿಸಬೇಕಾಯಿತೆಂದು ಗಾಂಧೀಜಿ ವಿವರಿಸಿದರು. ಈಗ ಬಿಹಾರಕ್ಕೆ ಉತ್ತರ ಕೊಡಲೇನೋ ಎಂಬಂತೆ ಪಂಜಾಬ ದುರಂತ ಬಂದಿದೆ. ಮರಣವೆಂಬುದು ನಮ್ಮ ಗೆಳೆಯ, ಸಂಗಾತಿ. ಶೌರ್ಯದಿಂದ ಸತ್ತವರಿಗೆ ಸದ್ಗತಿಯೇ ಆಯಿತು. ಹೇಡಿಗಳಂತೆ ಯಾರಾದರೂ ಸತ್ತಿದ್ದರೆ ಅದರ ಮಹತ್ವವೂ ಇಂದು ಉಳಿದಿಲ್ಲ. ಅವರೂ ಹೋಗಿಬಿಟ್ಟಿದ್ದಾರೆ. ಆದರೆ ಬದುಕಿ ಉಳಿದಿರುವ ದುಷ್ಕರ್ಮಿಗಳೀಗ ಹೊಣೆಗಾರರು. ಅವರು ಪರಮಾತ್ಮನಿಗೆ ಉತ್ತರ ಕೊಡಬೇಕಾಗುವದು.

ಆ ಮೇಲೆ ಗಾಂಧೀಜಿ ಹಿಂಸೆಯನ್ನೂ ಪಶುನೀತಿಯನ್ನೂ ಕಳೆದೊಗೆಯಿರೆಂದು ಜನರಿಗೆ ಬಿನ್ನವಿಸಿಕೊಂಡರು. ತಾವು ಬಿಹಾರದಲ್ಲಿರುವದು ಮುಸ್ಲಿಮರಲ್ಲಿ ಭರವಸೆಯನ್ನೂ ಹಿಂದುಗಳ ಹೃದಯದಲ್ಲಿ ಪ್ರೇಮವನ್ನೂ ಜಾಗರಿಸುವದಕ್ಕಾಗಿ. ಇದರಲ್ಲಿ ತಾವು ಯಶಸ್ವಿಯಾದರೆ ದೇಶದೆಡೆಗಳಲ್ಲಿಯೂ ಎಲ್ಲ ಸರಿಹೋಗುವದೆಂದು ಗಾಂಧೀಜಿ ಹೇಳಿದರು. ಸ್ವಾತಂತ್ರ್ಯಕ್ಕಾಗಿ ಸತ್ಯ ಅಹಿಂಸೆಗಳ ಆಯುಧದಿಂದ ಹೋರಾಡಿದ ಹಿಂದುಸ್ತಾನದಲ್ಲಿ ಇಂದು ಮೃಗಧರ್ಮ ಹಬ್ಬಿರುವದು ದೊಡ್ಡ ದುರಂತ. ಕಾಂಗ್ರೆಸ್ಸು ಪ್ರತಿಪಾದಿಸಿದ್ದನ್ನೆಲ್ಲ ಜನರು ಬೀಳುಗಳೆಯುತ್ತಿದ್ದಾರೆ.

ಆಳುವ ಪ್ರಭುತ್ವವೊಂದು ಸ್ವೇಚ್ಛೆಯಿಂದ ತನ್ನ ಸಾಮ್ರಾಜ್ಯವನ್ನು ತೊರೆದು ಹೋದುದು ಇತಿಹಾಸದಲ್ಲಿ ಅಲಭ್ಯ ಘಟನೆ. ಆದರೆ ಇಂದು ಬ್ರಿಟಿಶರು ಹಾಗೆಮಾಡಲು ಯತ್ನಿಸುತ್ತಿದ್ದಾರೆ. ಅವರ ಹಳೆಯ ಕೃತಿಗಳು ಹೇಗೆಯೇ ಇದ್ದಿರಲಿ, ಅವರ ಪ್ರಾಮಾಣಿಕತೆಯನ್ನು ಈಗ ನಂಬುವದು ಯೋಗ್ಯ. ಆದರೆ ಹಿಂದೀಯರು ಯಾದವೀ ಯುದ್ಧದಿಂದ ದೇಶದ ಹೀನತೆಯನ್ನು ಪ್ರದರ್ಶಿಸಲಿರುವರೆ? ಹಾಗೆ ಮಾಡಿದರೆ ಬ್ರಿಟಿಶ ಸೈನ್ಯವನ್ನು ಶಾಂತಿ ಸುವ್ಯವಸ್ಥೆಗಳ ರಕ್ಷಣೆಗಾಗಿ ಹಿಂದುಸ್ತಾನದಲ್ಲಿ ಉಳಿಸಿಕೊಳ್ಳುವ ಅವಶ್ಯಕತೆಯೂ ಮೂಡಬಹುದು. ಅಂಥ ಮೂರ್ಖತನಕ್ಕೆ ಹಿಂದೀಯರು ಕೈಹಾಕಲಾರರೆಂದು ಗಾಂಧೀಜಿ ಆಶಿಸಿದರು.

ಆ ಮೇಲೆ ಅವರು ದಿಲ್ಲಿಯಲ್ಲಿ ನಡೆದಿರುವ ಏಶಿಯಾ ಸಮ್ಮೇಲನದ ಮಾತೆತ್ತಿದರು. ನಮ್ಮ ಪುತ್ರಪ್ರಾಯರಾದ ಜವಾಹರರು ಸಮ್ಮೇಲನಕ್ಕೆ ಬಂದ ಪ್ರತಿನಿಧಿಗಳ ಪ್ರೀತಿಗೆ ಪಾತ್ರರಾಗಿರುವದು ದೊಡ್ಡ ಸಂಗತಿ. ಜವಾಹರರಿಗೆ ಅವರಲ್ಲಿರುವ ಪ್ರೀತಿಯೂ ಅವರು ಕಾಣುತ್ತಿರುವ ಏಶಿಯಾದ ಒಗ್ಗಟ್ಟಿನ ಕನಸೂ ಅವರ ಸರ್ವಪ್ರಿಯತೆಗೆ ಕಾರಣ. ಆದರೆ ಹಿಂದುಸ್ತಾನ ತನ್ನ ಪರಂಪರೆಗನುಸಾರವಾಗಿ ನಡೆದುಕೊಂಡರೆ ಮಾತ್ರ ತಾನು ಅದಿ ತೋರಿಸಬೇಕಾದ ಭೂಮಿಕೆಗೆ ಅದು ಅರ್ಹವೆನಿಸೀತು. ಜವಾಹರರ ಏಶಿಯಾದ ಒಗ್ಗಟ್ಟಿನ ಕನಸನ್ನು ಅಂತಃಕಲಹದ ಮೂಲಕ ಹಾಳುಗೆಡಹುವಷ್ಟು ಕ್ರೂರ ಕೃತ್ಯ ಇನ್ನೊಂದಿಲ್ಲ.

ಸಮಾಪ್ತಗೊಳಿಸುತ್ತ ಗಾಂಧೀಜಿ ಹೇಳಿದ್ದು: ನಾವು ದೇವರಲ್ಲಿ ಹೃದಯಾರ್ಪಣ ಮಾಡಿದಲ್ಲದೆ ಈ ಕಲಹಕ್ಕೆ ಕೊನೆಯಿಲ್ಲ. ಇಂದು ತಮಗೆ ಬೆಂಬಲ ಉಳಿದಿಲ್ಲವೆಂದು ಅನಿಸತೊಡಗಿದೆಯೆಂದು ಅವರು ಹೇಳಿದರು. ಇದ್ದಿದ್ದರೆ, ಈ ದುರಂತಗಳು ಸಂಭವಿಸುತ್ತಲೆ ಇರಲಿಲ್ಲ. ಆದರೆ ಎಲ್ಲರೂ ತಮ್ಮ ಕೈಬಿಟ್ಟರೂ ದೇವರು ಬಿಡುವದಿಲ್ಲ. ಅವನು ತಮಗೆ ಕರ್ತವ್ಯ ನಿರ್ದೇಶ ಮಾಡೇ ಮಾಡುವನು. ಮನುಷ್ಯರ ಹೃದಯದಲ್ಲಿ ದೇವರು ಪ್ರತಿಷ್ಠಿತನಾದಾಗಲೇ ಅವರು ಸಮಸ್ತ ಕ್ರೋಧವನ್ನು ತೆಗೆದೊಗೆಯುವರು.

ಎಪ್ರಿಲ ೨, ೧೯೪೭

ನೆರೆದವರಲ್ಲಿ ಎರಡು ಮೂರು ಜನರು ಕುರಾಣದ ಶ್ಲೋಕಗಳ ಪಠಣಕ್ಕೆ ಆಕ್ಷೇಪವೆತ್ತಿದ್ದರಿಂದ ಇವೊತ್ತೂ ಗಾಂಧೀಜಿ ಪ್ರಾರ್ಥನೆಯನ್ನು ಜರಗಿಸಲಿಲ್ಲ.

ಪ್ರಾರ್ಥನೆಯನ್ನು ಪ್ರಾರಂಭಿಸುವ ಮೊದಲು ನಿನ್ನೆ ಒಬ್ಬನು ಮಾಡಿದಂತೆ ಇಂದಾದರೂ ಕುರಾಣ ಪಠನಕ್ಕೆ ಆಕ್ಷೇಪವೆತ್ತುವ ಉದ್ದೇಶ ಯಾರದಾದರೂ ಉಂಟೇನೆಂದು ಅವರು ಸಭಿಕರನ್ನು ಕೇಳಿದರು. ಇಬ್ಬರು ಮೂವರು ಆಕ್ಷೇಪವೆತ್ತಿ ಹಿಂದೂ ಮಂದಿರದಲ್ಲಿ ಕುರಾಣ ಶ್ಲೋಕಗಳನ್ನು ಪಠಿಸಲು ಗಾಂಧೀಜಿಗೆ ಅಧಿಕಾರವೇನೆಂದು ಪ್ರಶ್ನಿಸಿದರು.

ಈ ಮಂದಿರ ಭಂಗಿಗಳಿಗೆ ಸೇರಿದ್ದು ಅವರು ತಮ್ಮ ಪ್ರಾರ್ಥನಾವಿಧಿಗೆ ಆಕ್ಷೇಪವೆತ್ತಿಲ್ಲೆಂದು ಗಾಂಧೀಜಿ ಉತ್ತರಕೊಟ್ಟರು. ಅಲ್ಲದೆ, ತಾವೂ ಭಂಗಿಯಾಗಿರುವದರಿಂದ ತಮಗೆ ಸರಿದೋರಿದಂತೆ ಪ್ರಾರ್ಥನೆ ಮಾಡುವ ಹಕ್ಕು ತಮಗಿದೆ. ಕುರಾಣ ಪಠಣಕ್ಕೆ ಅಡ್ಡಿ ಮಾಡುವವರು ಭಂಗಿಗಳೂ ಅಲ್ಲ ಭಂಗಿಗಳಾಗಬಯಸುವವರೂ ಅಲ್ಲ.

ಪ್ರಾರ್ಥನೆಯನ್ನು ಆಲಿಸಲು ಅನೇಕರು ಇಚ್ಛೆಯನ್ನು ತೋರಿದರೂ ಗಾಂಧೀಜಿ ಪ್ರಾರ್ಥನೆ ನಡೆಸಲೊಪ್ಪಲಿಲ್ಲ. ಆ ಕೆಲವು ಆಕ್ಷೇಪಕರಿಗೇ ವಿಜಯವಾಗಲೆಂದರವರು. ಅದಾದರೂ ನಿಜವಾಗಿಯೂ ಹಿಂದೂ ಧರ್ಮಕ್ಕೆ ದೊರೆತ ವಿಜಯವಲ್ಲ. ಮರು ದಿನವೂ ಇದೇ ಪ್ರಶ್ನೆ ಕೇಳಿ ಉತ್ತರವನ್ನು ನಿರೀಕ್ಷಿಸುವದಾಗಿ ಗಾಂಧೀಜಿ ಹೇಳಿದರು.

ಯಾರೊ ಒಬ್ಬನು ಪಂಜಾಬದಲ್ಲಿ ಹಿಂದುಗಳು ಪಡುತ್ತಿರುವ ಪಾಡನ್ನು ಪ್ರಸ್ತಾವಿಸಿದನು. ಅದಕ್ಕೆ ಗಾಂಧೀಜಿ, ಬಿಸಿ ಮಾತುಗಳಿಂದ ಪಂಜಾಬದ ಕಣ್ಣೀರನ್ನೊರಸಬರುವದಿಲ್ಲವೆಂದೂ ಪಂಜಾಬ, ಬಿಹಾರ, ನೌಖಾಲಿಗಳ ಪೀಡಿತರ ದುಃಖದ ಪರಿಹಾರಕ್ಕಾಗಿಯೆ ತಮ್ಮ ಸೇವೆಯೆಲ್ಲ ಮೀಸಲಾಗಿದೆಯೆಂದೂ ಮಾರುತ್ತರವಿತ್ತರು.

ಎಪ್ರಿಲ ೩, ೧೯೪೭

ಇಂದೂ ಶ್ರೋತೃಗಳಲ್ಲಿ ಕೆಲವರು ಕುರಾಣ ಶ್ಲೋಕ ಪಠಣಕ್ಕೆ ಆಕ್ಷೇಪವೆತ್ತಿದ್ದರಿಂದ ಗಾಂಧೀಜಿ ಪ್ರಾರ್ಥನೆಯನ್ನು ತ್ಯಜಿಸಿದರು. ಕೆಲಕ್ಷಣ ಮೌನವನ್ನು ಆಚರಿಸಿ ಶಾಂತರಾಗಿ ಹೊರಟು ಹೋಗಲು ನೆರೆದವರನ್ನು ಅವರು ಕೇಳಿಕೊಂಡರು. ಈ ಮೌನ ದೇವರ ಸ್ಮರಣೆಗೆ ಮತ್ತು ಹೃದಯ ಶುದ್ಧಿಗಾಗಿದ್ದು ಮೌನದಲ್ಲಿಯೂ ಪ್ರಾರ್ಥನೆ ಮಾಡುವದು ಸಾಧ್ಯವೆಂದು ಅವರು ನುಡಿದರು.

ಇದಕ್ಕೆ ಮೊದಲು, ಕುರಾಣ ಪಠಿಸುವದನ್ನಾದರೂ ಬಿಡಬೇಕು, ಇಲ್ಲದಿದ್ದರೆ ತಾವು ಇಳಿದುಕೊಂಡ ವಾಲ್ಮೀಕಿ ಮಂದಿರವನ್ನಾದರೂ ಬಿಟ್ಟು ಹೋಗಬೇಕೆಂದು ತಮಗೊಂದು ಪತ್ರ ಬಂದಿದೆಯೆಂದು ಹೇಳಿ, ಕುರಾಣ ಶ್ಲೋಕಗಳ ಪಠನಕ್ಕೆ ಸೇರಿದವರಲ್ಲಾರದಾದರೂ ಆಕ್ಷೇಪವಿದೆಯೇನೆಂದು ಗಾಂಧೀಜಿ ವಿಚಾರಿಸಿದರು. ಕೆಲವರು ಕೈಯೆತ್ತಿ ಕುರಾಣವನ್ನು ಪಠಿಸಿದರೆ ತಾವು ಪ್ರಾರ್ಥನೆಯನ್ನು ನಡೆಯಗೊಡುವದಿಲ್ಲೆಂದು ತಿಳಿಸಲು ಅವರು ಪ್ರಾರ್ಥನೆಯನ್ನು ಜರಗಿಸದಿರಲು ನಿಶ್ಚಯಿಸಿದರು.

ಭಾಷಣವನಾಡುತ್ತ ಮುನ್ನಾದಿನ ಹೇಳಿದ್ದರ ಸತ್ಯ ಸೌಂದರ್ಯಗಳನ್ನು ಮನಗಂಡಿದ್ದಿರೇನೆಂದು ನೆರೆದವರನ್ನು ಗಾಂಧೀಜಿ ಕೇಳಿದರು. ಕರ್ತವ್ಯವೆಂದು ತಮಗನಿಸಿದ್ದರಿಂದ ಪರಾಙ್ಮುಖರಾಗುವವರು ತಾವಲ್ಲ. ಆದರೆ ಒಬ್ಬ ಹುಡುಗನಾದರೂ ಪ್ರಾರ್ಥನಾ ಸಭೆಯನ್ನು ಜರಗಿಸಲು ಅಡ್ಡ ನುಡಿದರೆ ಅದರಿಂದ ಪರಾವೃತ್ತರಾಗಬೇಕೆಂದು ತಮ್ಮ ಅಹಿಂಸೆಯ ಅಪ್ಪಣೆಯುಂಟು. ಇದನ್ನು ಹೇಡಿತನವೆಂದು ಮಾತ್ರ ಸರ್ವಥಾ ಗ್ರಹಿಸತಕ್ಕದ್ದಲ್ಲ. ವಿವಾದ ಹಿಂಸೆಗಳನ್ನು ತಡೆಯುವದಕ್ಕಾಗಿ ತಾವು ಪ್ರಾರ್ಥನೆಯನ್ನು ನಡೆಸಲಿಲ್ಲ. ಹಿಂಸೆಯೆಂಬುದು ಪಿಶಾಚಿಯ ಕಾಯಕ. ಅದರ ವಿರುದ್ಧ ತಾವು ಜೀವಮಾನವೆಲ್ಲ ಹೋರಾಡಿದ್ದೇನೆ.

ತಮ್ಮ ಪ್ರಾರ್ಥನೆಗೆ ವಿರುದ್ಧವಾಗಿರುವವರು ಸಭೆಗೆ ಬಾರದಿರಲಿ, ಇಲ್ಲದಿದ್ದರೆ ಬೇರೆಯಾಗಿ ಬಂದು ತಮ್ಮನ್ನು ಕೊಂದಾದರೂ ಹಾಕಲಿ ಎಂದು ಗಾಂಧೀಜಿ ಅಪೇಕ್ಷಿಸಿದರು. ಕೊಂದರೂ ತಾವು ರಾಮ ರಹಿಮರ ನಾಮೋಚ್ಚಾರವನ್ನು ಬಿಡುವವರಲ್ಲ. ಆವೆರಡೂ ತಮ್ಮ ಪಾಲಿಗೆ ಒಬ್ಬನೇ ಪರಮಾತ್ಮನ ಹೆಸರುಗಳು. ಆವೆರಡು ಹೆಸರುಗಳನ್ನು ಜಪಿಸುತ್ತ ಆನಂದದಿಂದ ಸಾಯಬಲ್ಲೆನೆಂದು ಅವರು ಹೇಳಿದರು.

ರಾಮ ರಹಿಮರ ನಾಮೋಚ್ಚಾರವನ್ನು ಬಿಟ್ಟರೆ ತಾವು ನೌಖಾಲಿಯ ಹಿಂದುಗಳ ಹಾಗು ಬಿಹಾರದ ಮುಸ್ಲಿಮರ ಮೋರೆಯನ್ನು ಹೇಗೆ ನೋಡಬೇಕು? ಎಂದು ಅವರು ಪ್ರಶ್ನಿಸಿಕೊಂಡರು.

ಪ್ರಾರ್ಥನೆ ನಡೆಯಬೇಕೆಂದು ಬಯಸುತ್ತಿದ್ದವರು ಉಪದ್ರವಕಾರಿಗಳ ಮೇಲೆ ಸಿಟ್ಟಿಗೇಳದೆ ಅವರಿಗಾಗಿ ಬೇಡಿಕೊಳ್ಳಬೇಕೆಂದು ಗಾಂಧೀಜಿ ಸೂಚಿಸಿದರು. ಸಿಟ್ಟು, ಸೇಡುಗಳು ಹಿಂದೂ ಧರ್ಮಕ್ಕೆ ಹಿತ ಮಾಡಲಾರವು.

ಗಾಂಧೀಜಿ ಹೊರಟು ಹೋಗುತ್ತಿದ್ದಂತೆ ಸಭಿಕರಲ್ಲೆರಡು ಬಣಗಳು ಜಗಳಾಡತೊಡಗಿದವು. ಆಗ ಗಾಂಧೀಜಿ ನಿಂತುಕೊಂಡೇ ಹದಿನೈದು ನಿಮಿಷ ಕಾಲ ಅವರನ್ನು ಕುರಿತು ಭಾಷಣ ಮಾಡಿದರು. ಕ್ರೋಧದಿಂದ ಏನೂ ಗಳಿಸಿದಂತಾಗುವದಿಲ್ಲ. ಪಂಜಾಬದ ಗಾಯಗಳನ್ನು ಹೇಗೆ ಮಾಯಿಸಬೇಕೆಂದು ವಿಚಾರಿಸಬೇಕಲ್ಲದೆ ಯಾರನ್ನೂ ಬೈದು ಫಲವಿಲ್ಲ. ಅದು ನಮ್ಮ ಧರ್ಮಕ್ಕೆ ವಿರುದ್ಧವಾದುದೆಂದು ಅವರು ಸಂತೈಸಿದರು.

ಎಪ್ರಿಲ ೪, ೧೯೪೭

ಇಂದು ಪ್ರಾರ್ಥನೆಯ ಬಯಲಲ್ಲಿ ಆಕ್ಷೇಪಕರಾರಾದರೂ ಇರುವರೇನೆಂದು ಮೊಟ್ಟ ಮೊದಲು ಗಾಂಧೀಜಿ ವಿಚಾರಿಸಿದರು. ಹಿಂದೂ ಮಹಾಸಭೆಯ ಸದಸ್ಯನೊಬ್ಬನು ಹಿಂದಿನ ಮೂರು ದಿನಗಳ ಘಟನೆಗಾಗಿ ಪಶ್ಚಾತ್ತಾಪವನ್ನು ಪ್ರದರ್ಶಿಸಿ ನಾಲ್ಕು ಮಾತು ಹೇಳಬಯಸಿದನು. ತಾನೂ ತನ್ನ ಸಹಸದಸ್ಯರೂ ಈ ವರ್ತನೆಯೊಡನೆ ಸಹಮತರಾಗಿಲ್ಲವೆಂದು ಅವನು ತಿಳಿಸಿದನು. ಪ್ರಾರ್ಥನೆಯ ಬಯಲು ವಾದಭೂಮಿಯಲ್ಲ. ಗಾಂಧೀಜಿಯೊಡನೆ ತಮ್ಮ ವಿವಾದವೇನಾದರೂ ಇದ್ದರೆ ಅದನ್ನು ಹೊರಗೆ ಹೋರಾಡಿ ಬಗೆಹರಿಸಿಕೊಳ್ಳುವೆವು. ಆದುದರಿಂದ ಪ್ರಾರ್ಥನೆ ನಿರಾತಂಕವಾಗಿ ಸಾಗುವಂತೆ ನಿಶ್ಶಬ್ದವಾಗಿರಬೇಕೆಂದು ಸಭಿಕರಿಗೆ ಅವನು ವಿನಂತಿ ಮಾಡಿಕೊಂಡನು.

ಕುರಾಣ-ಶರೀಫದ ವಾಕ್ಯಗಳನ್ನು ಹಿಂದೂ ಮಂದಿರದಲ್ಲಿ ಪಠಿಸುವದಕ್ಕೆ ಇಂದು ಒಬ್ಬನೇ ಒಬ್ಬ ಆಕ್ಷೇಪವೆತ್ತಿದನು. ಇಂಥ ಆಕ್ಷೇಪವನೆತ್ತಲು ಈ ಸ್ಥಳದ ಹರಿಜನರು ಮಾತ್ರ ಅಧಿಕಾರಿಗಳೆಂದು ಗಾಂಧೀಜಿ ಹೇಳಿದರು. ಆಕ್ಷೇಪಕನು ಆಗ ಆಕ್ಷೇಪವನ್ನು ಹಿಂತೆಗೆದುಕೊಂಡನು. ಈ ಮೂರುದಿನಗಳ ಘಟನೆಗಳಿಂದ ಈ ಸ್ಥಳದ ಹರಿಜನರು ಖಿನ್ನರಾಗಿದ್ದಾರೆಂದು ಗಾಂಧೀಜಿ ನುಡಿದರು. ಅವರು ತಮ್ಮ ತಮ್ಮಂದಿರು. ತಾವು ಒಬ್ಬ ಭಂಗಿ. ನಿಜವಾದ ಭಂಗಿಗೆ, ಹಾಗೆಯೆ ನಿಜವಾದ ಹಿಂದುವಿಗೆ ದೇಹದ ಕಲ್ಮಷವನ್ನು ತೆಗೆಯುವದಷ್ಟೇ ಕರ್ತವ್ಯವಾಗಿರದೆ ಆತ್ಮದ ಕಲ್ಮಷವನ್ನು ಶುದ್ಧ ಮಾಡುವದೂ ಆಗಿದೆ. ನಿಜವಾದ ಹಿಂದು ಸರ್ವ ಧರ್ಮಗಳಲ್ಲಿಯೂ ಸತ್ಯವನ್ನು ಕಾಣುತ್ತಾನೆ. ಕುರಾಣದ ಸಾರಸರ್ವಸ್ವ ಎಲ್ಲ ಧರ್ಮಗಳಲ್ಲಿಯೂ ಇದೆ.

ಇಂದು ರಾವಳಪಿಂಡಿಯಿಂದ ಬಂದ ಗೆಳೆಯರು ಅಲ್ಲಿ ನಡೆದ ಅತ್ಯಾಚಾರಗಳನ್ನು ಬಣ್ಣಿಸಿದ ಬಗೆಯನ್ನು ಗಾಂಧೀಜಿ ಸಭಿಕರಿಗೆ ತಿಳಿಸಿದರು. ಅವರು ಗಾಂಧೀಜಿಯ ಸೇವೆ ಸಹಾಯ ಸೂಚನೆಗಳನ್ನು ಕೋರಿದ್ದರು. ಕುರಾಣ ಶ್ಲೋಕದ ಪಠನಕ್ಕೆ ಇಲ್ಲಿ ಎದ್ದ ಆಕ್ಷೇಪ ತಮಗರ್ಥವಾಗುವದಿಲ್ಲೆಂದು ಅವರು ಗಾಂಧೀಜಿಗೆ ಹೇಳಿದರು. ಮೇಲೆ ಹೇಳಿದ ಶ್ಲೋಕದ ಪಠನಕ್ಕೆ ಮುಸ್ಲಿಮರು ಕೆಲವರು ಆಕ್ಷೇಪವೆತ್ತಿದ್ದರೂ ಮುಸ್ಲಿಮರು ಕೂಡ ತಮ್ಮ ಪ್ರಾರ್ಥನೆಯನ್ನು ತಡೆದಿದ್ದಿಲ್ಲವೆಂದರು ಗಾಂಧೀಜಿ.

ವೇದಗಳು ಅನಾದಿ ಗ್ರಂಥಗಳೆಂದು ಗಾಂಧೀಜಿ ಮುಂದೆ ಸಾಗಿದರು. ಉಪನಿಷತ್ತುಗಳೂ ಹಾಗೆಯೆ ಆದರೆ ಅವುಗಳ ಪರಿಜ್ಞಾನ ನಮಗೆ ಪರಿಪೂರ್ಣವಾಗಿ ಆಗಿಲ್ಲ. ಧರ್ಮಗ್ರಂಥಗಳು ಕೆಲವದರಲ್ಲಿ ದೋಷಗಳೇನಾದರೂ ಬಂದು ಹೊಕ್ಕಿದರೆ ಅವು ಎಷ್ಟೋ ವರ್ಷಗಳ ಮೇಲೆ ಬರೆಹಕ್ಕಿಳಿದುದೇ ಅದಕ್ಕೆ ಕಾರಣ. ಹಿಂದೂ ಧರ್ಮವೊಂದು ಶ್ರೇಷ್ಠ ಧರ್ಮ. ಅದರಲ್ಲಿ ಅನಂತ ಸಹಿಷ್ಣುತೆಯೂ ಪರಿಗ್ರಹಣಶಕ್ತಿಯೂ ಇದೆ. ಹರಿಜನ ಸ್ತ್ರೀ ಸಾಧುವೊಬ್ಬಳು ತರುಣ ಜಿಜ್ಞಾಸುವಿಗೆ ಹೇಳಿದಂತೆ ಪರಮಾತ್ಮನು ಸರ್ವವ್ಯಾಪಿ. ಅವನು ಮಾನವನ ಹೃದಯದ ಅಧಿಪತಿ. ಅನನ್ಯ ಭಕ್ತಿಯೊಂದೇ-ಅದು ಯಾವ ಭಾಷೆಯಲ್ಲೆ ಇರಲೊಲ್ಲದೇಕೆ — ಅವನಿಗೆ ಬೇಕಾದ ವಸ್ತು. ಆದುದರಿಂದ ಕುರಾಣ ಶರೀಫದ ಆ ಮಹಾವಾಕ್ಯದ ಪಠಣಕ್ಕೆ ಆಕ್ಷೇಪವೆತ್ತುವದು ಕೇವಲ ಅಹಿಂದುತ್ವ, ಧರ್ಮ ಬಾಹಿರತೆ.

ಆ ಮೇಲೆ ಪೂರ್ಣ ಪ್ರಾರ್ಥನೆ ಜರಗಿತು. ಪ್ರಾರ್ಥನೆ ಮುಗಿದ ಬಳಿಕ ಗಾಂಧೀಜಿ ಮತ್ತೊಮ್ಮೆ ಸಭಿಕರನ್ನು ಕುರಿತು ಭಾಷಣ ಮಾಡಿದರು. ಈಗ ಮೂರು ದಿನಗಳಿಂದ ಅಜ್ಞಾನಿಗಳು ಕೆಲವರ ಆಕ್ಷೇಪದ ಫಲವಾಗಿ ಪ್ರಾರ್ಥನೆ ಜರಗಲಾರದೆ ಹೋದುದರಿಂದ ನೂರಾರು ಜನರಿಗೆ ನಿರಾಶೆಯಾಯಿತು ಎಂದು ಗಾಂಧೀಜಿ ಪರಿತಪಿಸಿದರು. ತಾವು ಮಾತ್ರ ಆ ಆಕ್ಷೇಪಕರಿಗೆ ಋಣಿಗಳಾಗಿದ್ದೇವೆ ಅವರು ತಮಗೆ ಹೃದಯ ಮಂಥನಕ್ಕೆ ಅವಕಾಶವೊದಗಿಸಿದ್ದಕ್ಕಾಗಿ ಅವರನ್ನು ಸಂತೈಸುವದು ತಮ್ಮಿಂದಾಗದುದಕ್ಕೆ ಅವರ ಬಗ್ಗೆ ತಮ್ಮ ಹೃದಯದಲ್ಲೇನಾದರೂ ಕಾಲುಷ್ಯವುಂಟಾಗಿದೆಯೇ ಎಂದು ತಾವೇ ತಮ್ಮನ್ನು ಕೇಳಿಕೊಂಡಿದ್ದೇವೆ. 'ಇಂದು ಹಾಡಿದ ಭಜನದ ತಿರುಳು ನಿಮಗೆ ಹೊಳೆದಿದ್ದರೆ ದೇವರು ಕಳಿಸಿದ್ದನ್ನೆಲ್ಲ ವರವೆಂದು ಸ್ವೀಕರಿಸುವದು ನಮ್ಮ ಕರ್ತವ್ಯವೆಂದು ನೀವು ತಿಳಿದುಕೊಂಡಿರಬಹುದು. ಈ ಪರೀಕ್ಷೆಯಲ್ಲಿ ನಾನು ಉತ್ತೀರ್ಣನಾದಂತೆ ಎನಿಸುತ್ತಿದೆ. ಒಂದೇ ಉಸಿರಿಗೆ ರಾಮ ರಹಿಮ ಎಂದು ಉಚ್ಚರಿಸಿದರೆ ನನ್ನನ್ನು ಕೊಲ್ಲುವೆವೆಂದು ಮೂರು ನಾಲ್ಕು ಜನರು ಹೇಳಿದರೂ ಆ ಹೆಸರುಗಳನ್ನೇ ಜಪಿಸುತ್ತ ನಗುಮೊಗದಿಂದ ಸಾಯುವೆ."

ನೌಖಾಲಿಯಲ್ಲಿ ರಾಮಧುನಿ ಭಜನೆಯನ್ನು ಸಾಗಿಸಲು ತಮಗೆ ಎಷ್ಟು ಕಷ್ಟವಾಯಿತೆಂದು ಗಾಂಧೀಜಿ ವಿವರಿಸಿದರು. ಆದರೆ ಅಲ್ಲಿಯೂ ತಮ್ಮ ಸಂಪ್ರದಾಯದಲ್ಲೆ ಆರಾಧನೆಯನ್ನು ಸಾಗಿಸಿಕೊಂಡು ಹೋಗಲು ತಮಗೆ ಸಾಧ್ಯವಾಗಿತ್ತು. ನಮ್ಮ ಹೃದಯದಲ್ಲಿ ಕ್ರೋಧವಾಗಲಿ ದ್ವೇಷವಾಗಲಿ ಇಲ್ಲದಿದ್ದರೆ ಎಲ್ಲವೂ ಸರಿ ಹೋಗುವದು. ದೇವರ ನಾಮವನ್ನು ಅರಬ್ಬಿ ಭಾಷೆಯಲ್ಲಿ ಉಚ್ಚರಿಸಿದಾಕ್ಷಣ ಅದೆಂತು ಪಾಪವಾದೀತು ? ಹಿಂದೂ ಧರ್ಮದ ಅಮರ ಗ್ರಂಥಗಳನ್ನು ಅರ್ಥ ಮಾಡಿಕೊಳ್ಳದೆ ಹಿಂದುತ್ವವನ್ನು ನೀಚತೆಗಿಳಿಸಬಾರದೆಂದು ಗಾಂಧೀಜಿ ಸಭಿಕರಲ್ಲಿ ಬೇಡಿಕೊಂಡರು. ಪ್ರತಿಯೊಬ್ಬನಿಗೂ ಅವನ ಮನವೊಪ್ಪಿದಂತೆ ಪ್ರಾರ್ಥನೆ ಮಾಡುವ ಅಧಿಕಾರವಿರಬೇಕು.

ಇಲ್ಲಿ ದೊಡ್ಡ ಕಾರ್ಯಗಳಲ್ಲಿ ಮಗ್ನರಾಗಿ ತಾವು (ಗಾಂಧೀಜಿ) ಸಂತ್ರಸ್ತ ಪ್ರದೇಶಗಳನ್ನು ಮರೆತೆವೆಂದು ಕೆಲವರು ಅನುಮಾನಿಸುತ್ತಿದ್ದಾರೆಂದ ಗಾಂಧೀಜಿ ಮುಂದುವರಿಸಿದರು. ನೌಖಾಲಿ, ಬಿಹಾರ, ಪಂಜಾಬಗಳಲ್ಲಿ ಜನರು ಹುಚ್ಚೆದ್ದುದಕ್ಕಾಗಿ ತಮ್ಮ ಹೃದಯವೆಷ್ಟು ಅತ್ತಿದೆ, ತಾವೆಂಥ ಯಾತನೆಯನ್ನು ಅನುಭವಿಸಿದ್ದೇವೆ, ಇದು ಪರಮಾತ್ಮಗೊಬ್ಬಗೇ ಗೋಚರ. ತಾವೆಲ್ಲೇ ಇದ್ದರೂ-ವಾಯಿಸರಾಯರೊಡನೆ ಮಾತುಕತೆ ನಡೆಸುತ್ತಿರುವಾಗ ಕೂಡ— ಆ ಪ್ರದೇಶಗಳಿಗಾಗಿಯೆ ಶ್ರಮಿಸುತ್ತಿರುವದಾಗಿ ಗಾಂಧೀಜಿ ಸಭಿಕರಿಗೆ ಆಣೆಯಿಟ್ಟು ಹೇಳಿದರು. ಹಿಂದೂ—ಮುಸ್ಲಿಂ ಐಕ್ಯಕ್ಕಾಗಿ ಹೆಣಗುವದಕ್ಕಿಂತ ದೊಡ್ಡ ಕಾರ್ಯ ತಮಗೆ ಬೇರೊಂದಿಲ್ಲ. ನೌಖಾಲಿ, ಬಿಹಾರ, ಪಂಜಾಬಗಳನ್ನು ಮರೆತರೆ ತಾವುಹಿಂದುಸ್ತಾನದ ಸೇವೆಮಾಡುವಂತಿಲ್ಲ. ತಾವು ದೇವರ ದಾಸನೆಂದು ಹೇಳಿಕೊಳ್ಳುವವರು. ಪರಮಾತ್ಮನ ಅನುಜ್ಞೆಯಿಲ್ಲದೆ ಉಣ್ಣುವದು ಕುಡಿಯುವದು ಅಥವಾ ಬೇರಾವ ಕೆಲಸ ಮಾಡುವದೂ ತಮ್ಮಿಂದಾಗದು. «ಕಾಲಾಂತರದಲ್ಲಿ ನನ್ನ ಕಾರ್ಯವನ್ನು ನೀವು ಚೆನ್ನಾಗಿ ಅರ್ಥ ಮಾಡಿ ಕೊಳ್ಳುವಿರೇನೊ. ಆ ವರೆಗೆ ಪರಮಾತ್ಮನೆಲ್ಲೆಲ್ಲಿ ನನ್ನನ್ನು ಒಯ್ಯುವನೊ ಅಲ್ಲಿ ನನ್ನ ಕರ್ತವ್ಯವನ್ನು ಪಾಲಿಸುವದೊಂದೆ ನನಗೆ ಸೇರಿದ್ದು.

ಎಪ್ರಿಲ ೫, ೧೯೪೭

ಇಂದು ಪ್ರಾರ್ಥನೆಯನ್ನು ಮೊದಲು ಮಾಡುವ ಪೂರ್ವದಲ್ಲಿ, ತಮ್ಮ ರೂಢಿಯ ಪದ್ಧತಿಯಲ್ಲಿ ಪ್ರಾರ್ಥನೆ ಮಾಡುವದಕ್ಕೆ ಯಾರದಾದರೂ ಆಕ್ಷೇಪವುಂಟೇನೆಂದು ಗಾಂಧೀಜಿ ಪುನಃ ಕೇಳಿದರು. ಈ ಬಾರಿ ಆಕ್ಷೇಪಕರಿರಲಿಲ್ಲ. ಅದಕಾಗಿ ಗಾಂಧೀಜಿ ಸಂತೋಷಪಟ್ಟರು. ಒಂದು ಧರ್ಮ ಇನ್ನೊಂದಕ್ಕಿಂತ ಶ್ರೇಷ್ಠವೆಂದು ಬಗೆಯುವದರ ಮೌಢ್ಯವನ್ನು ಅವರು ಇನ್ನೊಮ್ಮೆ ನೆನಪಿಗೆ ತಂದುಕೊಟ್ಟರು. ಈಚೆಗಿನ ಘಟನೆಗಳಿಗೆ ದೇಶದಲ್ಲಿ ವ್ಯಾಪಿಸಿರುವ ದ್ವೇಷಮಯ ವಾತಾವರಣವೇ ಕಾರಣವೆಂದು ತಮಗೆ ಖಚಿತವಾಗಿದೆ. ಬಿರುಗಾಳಿಯ ನಡುವೆ ಶಾಂತ ಚಿತ್ತರಾಗಿದ್ದರೇನೆ ನಮ್ಮ ಶಕ್ತಿ ಹೆಚ್ಚುವದು. ಆ ಇನ್ನಿಲ್ಲದ ಸುದಿನಗಳಲ್ಲಿ, ಖಿಲಾಫತ ಚಳವಳಿಯಲ್ಲಿ ಹಿಂದೂ ಮುಸ್ಲಿಮರು ಹೆಗಲಿಗೆ ಹೆಗಲಿತ್ತು ಹೋರಾಡುತ್ತಿದ್ದಾಗ, ಮೌಲಾನಾ ಮಹಮ್ಮದ ಅಲಿಯವರು ನಮ್ಮ ಅತಿ ಪ್ರಚಂಡ ಆಯುಧವೆಂದರೆ ಚರಖಾ ಮತ್ತು ನಮ್ಮ ಅತಿ ಬಲಿಷ್ಠ ಗುಂಡುಗಳೆಂದರೆ ತಾವು ನೂತ ನೂಲಿನ ಲಡಿಯೆಂದು ಹೇಳಿದುದನ್ನು ಗಾಂಧೀಜಿ ನೆನೆದುಕೊಂಡರು. ಕಾಂಗ್ರೆಸ್ಸು ಖಿಲಾಫತ ಚಳವಳಿಯಲ್ಲಿ ಸೇರಬೇಕಾದರೆ ಅದು ಅಹಿಂಸಾತ್ಮಕ ಹೋರಾಟವಾಗಬೇಕೆಂದು ಆಗ ಗಾಂಧೀಜಿ ಸೂಚಿಸಿದ್ದರು. ಮತ್ತು ಆ ಕರಾರು ಅಲ್ಲಾನ ಹೆಸರಲ್ಲಿ ಅಂಗೀಕರಿಸಲ್ಪಟ್ಟಿತ್ತು. ಇಂದು ಹಿಂದುಸ್ತಾನ ಸ್ವಾತಂತ್ರ್ಯದ ಹೊಸಲನ್ನು ಮುಟ್ಟಲು ಕಾರಣ ಆ ಅಹಿಂಸಾತ್ಮಕ ಹೋರಾಟವೇ.

—೯ನೇ ಪುಟಕ್ಕೆ

## ದಿಲ್ಲಿ ವಿಷ್ಕಂಭಕ

(೮ನೇ ಪುಟದಿಂದ)

ನಾಳೆ ರಾಷ್ಟ್ರೀಯ ಸಪ್ತಾಹದ ಪ್ರಾರಂಭವೆಂಬ ಮಾತನ್ನು ಗಾಂಧೀಜಿ ಸ್ಮರಣೆಗೆ ತಂದುಕೊಟ್ಟರು. ಒಂದು ರಾತ್ರಿ ಕನಸಿನಲ್ಲಿ ಆಕಸ್ಮಾತ್ತಾಗಿ ೨೪ ತಾಸಿನ ಉಪವಾಸದ ವಿಚಾರ ತಮ್ಮ ಚಿತ್ತದಲ್ಲಿ ಸುಳಿದುದು, ಆಗ ಮದ್ರಾಸಿನಲ್ಲಿ ತಮ್ಮ ಯಜಮಾನರಾಗಿದ್ದ ರಾಜಾಜಿಯೊಡನೆ ಆ ವಿಚಾರವನ್ನು ಎತ್ತಿದ್ದು, ಅದು ಅವರಿಗೆ ಮನಸಿಗೆ ಬಂದುದು, ಆ ಸಂಬಂಧದ ಕರಪತ್ರಗಳನ್ನು ಹಂಚಿದ್ದು ಮತ್ತು ಆ ಕರೆಗೆ ದೊರೆತ ವಿಸ್ತಾರವಾದ ಹೃತ್ಪೂರ್ವಕ ಉತ್ತರ ಇವೆಲ್ಲವನ್ನು ಅವರು ವಿವರಿಸಿದರು. ದೇಶದಲ್ಲಿ ಅಂಥ ಜಾಗ್ರತಿಯಾದೀತೆಂದು ತಾವು ಕನಸಿನಲ್ಲಿಯೂ ನೆನೆಸಿರಲಿಲ್ಲ—ದೇಶವೆಂದರೆ ಅದರ ನಗರಗಳಷ್ಟೇ ಅಲ್ಲ, ಹಿಂದುಸ್ತಾನದ ಮಾನವ ರಾಶಿಯ ನಿವಾಸವಾದ ಆ ೭ ಲಕ್ಷ ಹಳ್ಳಿಗಳೆಂದು ತಮ್ಮ ಅರ್ಥ. ಆ ಕರೆಗೆ ಇನ್ನೊಮ್ಮೆ ಓಗೊಡಬೇಕೆಂದು ಗಾಂಧೀಜಿ ಸಭಿಕರನ್ನು ಪ್ರಾರ್ಥಿಸಿದರು. ಆದರೆ ಅದರ ಪೂರ್ಣ ಇಂಗಿತ ಮನವರಿಕೆಯಾಗಿದ್ದರೆ ಮಾತ್ರ ಅವರು ಹಾಗೆ ಮಾಡಲಿ. ಹಿಂದೂ ಮುಸ್ಲಿಂ ಐಕ್ಯ, ಚರಖಾ ಮೊದಲಾದವುಗಳ ಮೂಲಕ ಸ್ವರಾಜ್ಯದ ಔಚಿತ್ಯ ಸ್ಥಾಪನೆಗಾಗಿ ಅಂದು ಆ ಉಪವಾಸ ಕೈಕೊಳ್ಳಲ್ಪಟ್ಟಿತ್ತು. ಆದರೆ ಅಕಟಾ! ಕಾಂಗ್ರೆಸ್ ತ್ರಿವರ್ಣ ಧ್ವಜದ ಸಂಕೇತಾರ್ಥಗಳಾದ ಹಿಂದೂ–ಮುಸ್ಲಿಂ–ಸೀಖ ಐಕ್ಯ ಇತ್ಯಾದಿಗಳು ಇಂದು ತಮ್ಮ ಬಡ ಗುಡಿಸಲಲ್ಲಲ್ಲದೆ ಬೇರೆಲ್ಲೂ ಕಾಣ ಸಿಗುವದಿಲ್ಲ. ಅದೇನೇ ಇದ್ದರೂ ಸಭಿಕರು ಅಂತರ್ಯುದ್ಧದ ಫಲವೇನಾದೀತೆಂದು ಚಿಂತಿಸಿ ನೌಖಾಲಿ, ಬಿಹಾರ, ಪಂಜಾಬಗಳ ದುರಂತ ಘಟನೆಗಳಿಗಾಗಿ ಯಾರ ಮೇಲೂ ದ್ವೇಷಕ್ಕೆಡೆಗೊಡದೆ ಆದುದನ್ನೆಲ್ಲ ಮರೆತು ಕ್ಷಮಿಸಿ ಬಿಡಬೇಕೆಂದು ಗಾಂಧೀಜಿ ಕೇಳಿಕೊಂಡರು. ಇಂದಿಗೂ ರಾಟೆಯೇ ಅಹಿಂಸೆಯ ನಿಜ ಕುರುಹೆಂಬ ತಮ್ಮ ನಂಬಿಕೆ ಎಂದಿಗಿಂತ ದೃಢವಾಗಿದೆ. ಅದೊಂದೇ ತನ್ನ ಸಂಗೀತದಿಂದ ಮನಸ್ಸಿಗೆ ಸಮಾಧಾನವನ್ನೂ ಉತ್ಕಂಠಿತ ಹೃದಯಕ್ಕೆ ಶಾಂತಿಯನ್ನೂ ತಪ್ಪದೆ ಕೊಡುವ ಸಾಧನ. ಅದು ಇಂದು ವಿಷಭರಿತ ಲಾವಾರಸವನ್ನು ಕಾರುತಿರುವ ದ್ವೇಷದ ಜ್ವಾಲಾಮುಖಿಯನ್ನು ಆರಿಸಬೇಕೆಂದು ನಿಜವಾಗಿ ಬಯಸುವವರು ತಮ್ಮೊಡನೆ ಬುದ್ಧಿಪುರಸ್ಸರವಾಗಿ ಉಪವಾಸ ಮಾಡಬೇಕೆಂದು ಗಾಂಧೀಜಿ ಆಶಿಸಿದರು. ಮೆರವಣಿಗೆ ಧ್ವಜಾರೋಹಣ ವಿಧಿಗಳಿಗಿಂತಲೂ ಉಪವಾಸದ ಅರ್ಥ ಆಳವಾಗಿದೆ.

ಅವರು ಎಲ್ಲ ಹಿಂದೀಯರನ್ನು ಬಂಧುಗಳೆಂದು ಬಗೆದರೆ ಇಡಿ ಹಿಂದುಸ್ತಾನವೇ ಪಾಕಿಸ್ತಾನವಾಗಬಲ್ಲದೆಂದು ಗಾಂಧೀಜಿ ಮುಂದುವರಿದರು. ಹಿಂದುಸ್ತಾನವೆಂದರೆ ಬರಿ ಹಿಂದುಗಳಿಗಾಗಿರುವ ರಾಜ್ಯ, ಪಾಕಿಸ್ತಾನವೆಂದರೆ ಬರಿ ಮುಸ್ಲಿಮರಿಗಾಗಿ ಎಂದಾದರೆ, ಆಗ ಪಾಕಿಸ್ತಾನ ವಿಷಪ್ರವಾಹದ ರಾಜ್ಯವಾದೀತು. ತಮ್ಮ ಕನಸಿನ ರಾಜ್ಯವೆಂದರೆ ಪ್ರೇಮಪೀಯೂಷವೇ ಹೊಳೆಯಾಗಿ ಹರಿಯುವ ರಾಜ್ಯವೆಂದು ಅವರು ಹೇಳಿದರು.

ಆ ಮೇಲೆ ಗಾಂಧೀಜಿ ದೀನಬಂಧು ಆಂಡ್ರೂಜರನ್ನು ನೆನೆದುಕೊಂಡು ಕೆಲ ಕರುಣಾರ್ದ್ರ ವಚನಗಳನ್ನಾಡಿದರು. ಆಂಡ್ರೂಜರ ನಿಧನದ ವರ್ಷತಿಥಿ ಎಪ್ರಿಲ ೫ಕ್ಕೆ ಬರುತ್ತದೆ. ಅಂಥ ಭಾರತ ಮಿತ್ರರ ಬಗ್ಗೆ ವಿಶೇಷ ಪ್ರಸ್ತಾವವೇ ಅಗತ್ಯವಿಲ್ಲ. ಅವರ ಹೆಸರು ಎಂದಿಗೂ ಹಸುರಾಗಿಯೆ ಇರುವದು. ಅವರು ಹೃದಯತಃ ಹಿಂದೀಯರಾಗಿದ್ದರೂ ನಿಜವಾದ ಆಂಗ್ಲರಾಗಿದ್ದರು.

ಸಮಾರೋಪಗೊಳಿಸುತ್ತ, ರಾಷ್ಟ್ರೀಯ ಸೇವಾ ಸಂಘದಿಂದ ತಮಗೊಂದು ಪತ್ರ ಬಂದಿದ್ದು ಅದನ್ನು ಪತ್ರಿಕೆಗಳಿಗೆ ಪ್ರಕಟನೆಗೆ ಕೊಡುವದಾಗಿಯೂ ಅದರಲ್ಲಿ ಸಂಘದವರು ಹಿಂದಿನ ಮೂರು ದಿನಗಳಲ್ಲಿ ಪ್ರಾರ್ಥನೆಗೆ ಆತಂಕವಾದುದಕ್ಕೂ ತಮಗೂ ಯಾವ ಸಂಬಂಧವೂ ಇಲ್ಲವೆಂದು ತಿಳಿಸಿದ್ದಾರೆಂದೂ ಗಾಂಧೀಜಿ ತಿಳಿಸಿದರು. ಇದನ್ನು ಕೇಳಿ ತಮಗೆ ಸಂತೋಷವಾಗಿದೆ. ಅದನ್ನು ಸತ್ಯವೆಂದೂ ತಾವು ನಂಬುವೆವು. ಸರ್ವಥಾ ಬಹಿರಂಗವಾಗಿ ಕೆಲಸ ಮಾಡದಿದ್ದರೆ ಯಾವುದೇ ಸಂಸ್ಥೆ ಪ್ರಾಣಗಳನ್ನಾಗಲಿ ಧರ್ಮವನ್ನಾಗಲಿ ರಕ್ಷಿಸಲಾರದು.

ಎಪ್ರಿಲ ೬, ೧೯೪೭

ಪ್ರಾರ್ಥನಾ ಸಭೆಯನ್ನುದ್ದೇಶಿಸಿ ಮಾತಾಡುತ್ತ ಗಾಂಧೀಜಿ ಅಂದು ಹಾಡಲ್ಪಟ್ಟ ರುಚಿರವಾದ ಬಂಗಾಲಿ ಭಜನೆ ಮತ್ತು ರಾಮ, ರಹಿಮ ಮತ್ತು ಕೃಷ್ಣ, ಕರೀಮ ಈ ಉಭಯ ನಾಮಗಳನ್ನೊಳಗೊಂಡ ರಾಮಧುನಿಯತ್ತ ಸಭಿಕರ ಲಕ್ಷ್ಯವನ್ನೆಳೆದರು. ಅವುಗಳನ್ನು ಹಾಡುತಿದ್ದಾಗ ತಮ್ಮ ಕಣ್ಮುಂದೆ ನೌಖಾಲಿಯ ದೃಶ್ಯ ಬಂದು ನಿಂತಂತಾಯಿತು. ಈ ಭಜನೆ ಅಲ್ಲಿ ಆಗಾಗ್ಗೆ ಹಾಡಲ್ಪಡುತ್ತಿತ್ತು. ಒಮ್ಮೊಮ್ಮೆ ಅದನ್ನು ಹಾಡುತ್ತ ರಾಮಧುನಿಯನ್ನುಚ್ಚರಿಸುತ್ತ ಹಳ್ಳಿಯಿಂದ ಹಳ್ಳಿಗೆ ಪಯಣ ಬೆಳೆಸುತಿದ್ದುದೂ ಉಂಟು.

ಇಂದು ರಾಷ್ಟ್ರೀಯ ಸಪ್ತಾಹದ ಮೊದಲನೆ ದಿನ—ಉಪವಾಸ, ಪ್ರಾರ್ಥನೆಗಳ ದಿನ. ಅಪರಾಹ್ಣ ೩ ರಿಂದ ೪ ಗಂಟೆಯ ವರೆಗೆ ಸೂತ್ರಯಜ್ಞವಿತ್ತು. ಅದರಲ್ಲಿ ಕಾಂಗ್ರೆಸ ಅಧ್ಯಕ್ಷರೂ ಅವರ ಪತ್ನಿಯೂ ಜವಾಹರಲಾಲಜಿ ಮೊದಲಾದ ಮುಂದಾಳುಗಳೂ ಭಾಗವಹಿಸಿದ್ದರು. ಉಪವಾಸವೇನೋ ಬೇಗನೆ ಮುಕ್ತಾಯವಾಗುವದು. ಆದರೆ, ಗಾಂಧೀಜಿಯೆಂದರು, ಈ ರಾಮ ರಹಿಮರ ನಾಮಗಳೂ ಭಜನೆಯ ಸಂದೇಶವೂ ಉಪವಾಸದ ಈ ಆತ್ಮ ಸಮರ್ಪಣದ ಫಲವಾಗಿ ಎಲ್ಲರ ಹೃದಯದಲ್ಲಿ ಚಿರಂತನವಾಗಿ ಕೆತ್ತಲ್ಪಟ್ಟರೆ ಎಷ್ಟು ಒಳಿತಾಗುತ್ತಿತ್ತು!

ಮುಂದುವರಿಯುತ್ತ ಗಾಂಧೀಜಿ ಹೇಳಿದ್ದು: "ಕೆಲವರು ನನ್ನನ್ನು ನಿಂದಿಸುತ್ತಾರೆ; ಕೆಲವರು ತಮ್ಮ ಪತ್ರಗಳಿಗೆ ಉತ್ತರ ಕೊಡಲಾರದಷ್ಟು ದೊಡ್ಡ ಮನುಷ್ಯನಾದಿಯೆಂದು ಬಗೆಯುತ್ತಾರೆ; ಬೇರೆ ಕೆಲವರು ಪಂಜಾಬದಲ್ಲಿ ಉರಿ ಹಬ್ಬಿರುವಾಗ ದಿಲ್ಲಿಯಲ್ಲಿ ಮೆರೆಯುತಿದ್ದೀ ಎಂದು ಆರೋಪಿಸುತ್ತಾರೆ. ನಾನೆಲ್ಲಿದ್ದರೂ ಹಗಲಿರುಳೂ ಅವರಿಗಾಗಿಯೆ ದುಡಿಯುತಿದ್ದೇನೆಂದು ಅವರಿಗೆ ಹೇಗೆ ತಿಳಿಹೇಳಲಿ? ನಾನು ಅವರ ಕಣ್ಣೀರನ್ನು ಒರಸಲಾರೆ. ಅದನ್ನು ಮಾಡಬಲ್ಲವನು ಭಗವಂತನೊಬ್ಬನೆ. ಆದರೂ ಅಂತರಾತ್ಮನ ಆದೇಶ ಬಂದಾಕ್ಷಣ ನಾನು ಪಂಜಾಬಕ್ಕೆ ಹೋಗುವೆ. ಉತ್ತೇಜಕ ದ್ವೇಷ, ಪ್ರತಿಹಿಂಸಾಬುದ್ಧಿಗಳ ಗಂಧ ಹಬ್ಬಿರುವದನ್ನು ಅರಿತು ನನಗೆ ದುಃಖವಾಗಿದೆ. ಜನರು ಶಾಂತಚಿತ್ತರಾಗಿ ಹೃದಯ ಶುದ್ಧಿ ಮಾಡಿಕೊಳ್ಳದೆ ಹೋದರೆ ಎಲ್ಲರನ್ನೂ ನುಂಗಿ ನೊಣೆಯುವ ಭಯಾನಕ ದಾವಾನಲವನ್ನು ಇಡಿ ದೇಶದಲ್ಲಿ ಹೊತ್ತಿಸುವದು ನಿಶ್ಚಯ." ದೃಷ್ಟಾಂತವಾಗಿ ಗಾಂಧೀಜಿ ಮಹಾ ಭಾರತದ ಕಥೆಯತ್ತ ಬೊಟ್ಟುಮಾಡಿದರು. ಅದು ಹಿಂದುಸ್ತಾನದ ಇತಿಹಾಸವಾಗಿರದೆ ಮಾನವನದಾಗಿದೆ. ಅದು ಸಾತ್ವಿಕನಾದ ರಾಮನ ಭಕ್ತರಿಗೂ ತಾಮಸನಾದ ರಾವಣನ ಭಕ್ತರಿಗೂ ಹತ್ತಿದ ಹೋರಾಟದ ಕಥೆ. ಅವರು—ಒಂದೇ ರಕ್ತದ ಬಂಧುಗಳಾದ ಪಾಂಡವ ಕೌರವರು—ಹೋರಿದರು. ಫಲವೇನಾಯಿತು? ರಾವಣನನ್ನೇನೋ ಕೊಂದಂತಾಯಿತು, ನಿಜ; ಆದರೆ ಆ ಕಥೆ ಹೇಳಲು ಕೇವಲ ಏಳೇ ಏಳು ಜನರು ಉಳಿದರು. ಇದೀಗ ದೇಶದ ಇಂದಿನ ಸ್ಥಿತಿ, ಎಂದರು ಗಾಂಧೀಜಿ.

ಅಂದು ತಮ್ಮನ್ನು ಕಾಣಬಂದಿದ್ದ ಧೀರವೃದ್ಧ ರಾಷ್ಟ್ರೀಯ ಮುಸ್ಲಿಮರಾದ ಖ್ವಾಜಾ ಅಬ್ದುಲ್ ಮಜೀದರ ವಿಷಯವಾಗಿ ಹೃದಯಸ್ಪರ್ಶಿಯಾಗಿ ನಾಲ್ಕು ಮಾತುಗಳನ್ನು ಗಾಂಧೀಜಿ ಹೇಳಿದರು. ಹಿಂದೂ ಮುಸ್ಲಿಮರ ಹೃದಯೈಕ್ಯದ ಆ ಹಳೆ ಸುದಿನಗಳಿನ್ನು ಮರಳಿದ್ದರೆ! ಬಿಹಾರದಲ್ಲಿ ಹಿಂದುಗಳು ರಾಷ್ಟ್ರೀಯ ಮುಸ್ಲಿಮರನ್ನು ಕೊಂದರು; ಮುಸ್ಲಿಮರೂ ಇಸ್ಲಾಮದ ಹಿಂದೂ ಮಿತ್ರರನ್ನು ಸಾವಿಗೀಡು ಮಾಡಿದರು.

"ನೀವೆತ್ತ ಸಾಗುತ್ತಿದ್ದಿರೋ ಅದನ್ನು ತುಸು ಸಿಧಾನವಾಗಿ ಚಿಂತಿಸಿರಿ," ಎಂದು ಗಾಂಧೀಜಿ ಸಭಿಕರನ್ನು ಕೇಳಿಕೊಂಡರು. ಮುಸ್ಲಿಮರು ಹಿಂದುಗಳನ್ನು ನಾಶಮಾಡಬಯಸಿದರೂ ಹಿಂದುಗಳು ಅವರ ಬಗ್ಗೆ ಹೃದಯದಲ್ಲಿ ಕ್ರೋಧಗೊಳ್ಳಬಾರದೆಂದು ಅವರು ಪ್ರಾರ್ಥಿಸಿದರು. ಮರಣಕ್ಕೆ ಯಾರೂ ಹೆದರಕೂಡದು. ಪ್ರತಿಯೊಬ್ಬ ಮನುಷ್ಯನಿಗೂ ಸಾವು ಕಟ್ಟಿಟ್ಟದ್ದು. ಆದರೆ ಅವರು ನಗುತ್ತ ಸತ್ತರೆ ಅವರೊಂದು ಹೊಸಜೀವನವನ್ನೆ ಪ್ರವೇಶಿಸಿದಂತಾಗುವದು. ಅವರು ಹೊಸತೊಂದು ಹಿಂದುಸ್ತಾನವನ್ನು ಕಟ್ಟುವರು. ಭಗವದ್ಗೀತೆಯ ಎರಡನೆ ಅಧ್ಯಾಯದ ಕೊನೆಯ ಶ್ಲೋಕಗಳು ದೈವಭೀರುವಾದ ಮನುಷ್ಯನು ಜೀವಿಸಬೇಕಾದ, ಚಲಿಸಬೇಕಾದ, ವರ್ತಿಸಬೇಕಾದ ಬಗೆಯನ್ನು ಬಣ್ಣಿಸಿವೆ. ಆ ಶ್ಲೋಕಗಳನ್ನು ಪ್ರತಿಯೊಬ್ಬನೂ ಓದಿ, ಅರಿತು, ಮನನಮಾಡಿ, ಒಳಗೊಳಗೇ ಅರಗಿಸಿಕೊಳ್ಳಬೇಕೆಂದು ಗಾಂಧೀಜಿ ಅಪೇಕ್ಷಿಸಿದರು. "ಆಗ ನಮಗೆ ನಮ್ಮ ಧ್ಯೇಯಗಳೇನಾಗಿದ್ದವು, ಆದರಿಂದ ಇಂದು ನಾವೆಷ್ಟು ಕೀಳ್ಪಟ್ಟದ್ದೇವೆ ಎಂಬದರ ಅರಿವಾದೀತು. ಸ್ವಾತಂತ್ರ್ಯದ ಮುನ್ನಾದಿನ ನಾವು ಅದನ್ನು ಪಡೆಯಲು ಮತ್ತು ಕಾಪಾಡಿಕೊಳ್ಳಲು ಎಷ್ಟು ಮಟ್ಟಿಗೆ ಅರ್ಹರಿದ್ದೇವೆಂದು ನಮ್ಮನ್ನೇ ನಾವು ಕೇಳಿಕೊಳ್ಳುವದು ಕರ್ತವ್ಯ."

## ನವಖಾಲಿಯ ಬಗೆಗೆ

ನವಖಾಲಿಯ ಪರಿಸ್ಥಿತಿಯನ್ನು ಕುರಿತು ಗಾಂಧೀಜಿಯವರಿಗೆ ಕೆಳಗಿನ ತಂತಿಗಳು ಬಂದಿದ್ದು ಅವುಗಳಿಗೆ ಅವರಿತ್ತ ಉತ್ತರಗಳು ಇಂತಿವೆ—

ರಾಮಗಂಜದಿಂದ ಎಪ್ರೇಲ ೨ ನೇ ದಿನಾಂಕವುಳ್ಳ ಶ್ರೀ ಸತೀಶಚಂದ್ರದಾಸ ಗುಪ್ತರಿಂದ ಬಂದ ತಂತಿಯು ಹೀಗಿದೆ—

"ಇದು ಅವಸರಂಚೆಯ ಅರಿಕೆ. ಜಿಲ್ಲಾ ಮ್ಯಾಜಿಸ್ಟ್ರೇಟ, ಪೋಲೀಸ ಸುಪರಿಂಟೆಂಡೆಂಟ ಮತ್ತು ಮುಖ್ಯ ಮಂತ್ರಿಗಳಿಗೆ ಕೆಳಗೆ ಕೊಟ್ಟ ಪ್ರಕಾರ ತಂತಿಯನ್ನು ನಾವು ಕಳಿಸಿದ್ದೇವೆ. ೨೩ ನೇ ಮಾರ್ಚ ಮತ್ತು ನಿನ್ನಿನ ನಡುವಿನ ಅವಧಿಯಲ್ಲಿ ಬೆಂಕಿ ಹಚ್ಚಿದ ಐದು ಪ್ರಕರಣಗಳಾಗಿವೆ. ರಾಮಗಂಜ ಠಾಣೆಯಲ್ಲಿಯ ಮಹಮ್ಮದಪುರದಲ್ಲಿ ನಿನ್ನೆ ಒಂದು ಪ್ರಕರಣವಾಗಿದೆ. ಒಂದೇ ಕೋಣೆಯಲ್ಲಿ ಸುರಕ್ಷಿತತೆಯ ಸಲುವಾಗಿ ಮಲಗಿದ್ದ ಮೂರು ಕುಟುಂಬಗಳ ಗಂಡಸು, ಹೆಂಗಸು, ಹುಡುಗರನ್ನೊಳಗೊಂಡ ಇಪ್ಪತ್ತೊಂದು ಜನರನ್ನು ಜೀವಂತ ಸುಟ್ಟುಬಿಡುವ ಪ್ರಯತ್ನವಾಗಿದ್ದಿತು. ಈ ಕೋಣೆಯನ್ನು ಹೊರಗಿನಿಂದ ಚಿಲಕಹಾಕಿ ಈ ಗುಡಿಸಲು ಹಾಗು ಇತರ ಗುಡಿಸಲುಗಳಿಗೆ ಒಂದೇ ಕಾಲಕ್ಕೆ ಕೊಳ್ಳಿಯನ್ನು ಕೊಡಲಾಯ್ತು. ಗೋಡೆಯನ್ನು ಒಡೆದು ಒಳಗಿದ್ದವರು ಪಾರಾದರು.

ಎಪ್ರೇಲ ೫ ನೇ ದಿನಾಂಕದಲ್ಲಿ ರಾಮಗಂಜದಿಂದ ಶ್ರೀ ಸತೀಶಚಂದ್ರದಾಸ ಗುಪ್ತರು ಕಳಿಸಿದ ಇನ್ನೊಂದು ತಂತಿಯಲ್ಲಿ ಹೀಗೆ ಹೇಳಿದುವರು.

"ಮುಖ್ಯ ಮಂತ್ರಿ ಮತ್ತು ಸ್ಥಾನಿಕ ಅಧಿಕಾರಿಗಳಿಗೆ ಕೆಳಗಿನ ತಂತಿಯನ್ನು ಕಳಿಸಿದ್ದೇನೆ. ರಾಮಗಂಜ ಠಾಣೆಯ ಹತ್ತರ ಜಂಗಿರಗಾವದಲ್ಲಿ ನಿನ್ನೆ ರಾತ್ರಿ ಅಂದರೆ ಎಪ್ರೇಲ ೪ ನೇ ದಿನಾಂಕದಲ್ಲಿ ಜರುಗಿದ ಇನ್ನೊಂದು ಬೆಂಕಿ ಹಚ್ಚಿದ ಪ್ರಕರಣವನ್ನು ನಿಮ್ಮ ಗಮನಕ್ಕೆ ತರಬೇಕಾಗಿದೆ. ಇಲ್ಲಿಯೂ ಹಿಂದೆ ಹೇಳಿದ ಪ್ರಕರಣದಂತೆ ಹಿರಾಲಾಲ ಭೌಮಿಕ ಎಂಬವರನ್ನು ಅವರು ಮಲಗಿದ ಕೋಣೆಯ ಹೊರ ಚಿಲಕ ಹಾಕಿ ಇಡೀ ಮನೆಗೆ ಬೆಂಕಿಯನ್ನು ಹಚ್ಚಲಾಯಿತು. ಸುದೈವದಿಂದ ಶ್ರೀ ಹಿರಾಲಾಲರು ತಟ್ಟಿಯನ್ನು ಹರಿದು ಪಾರಾದರು. ಹಿಂದುಗಳನ್ನು ಜೀವಂತ ಸುಡುವ ನೀಚ ಪ್ರಯತ್ನಗಳ ಬಗೆಗೆ ವಿಚಾರ ಮಾಡಬೇಕೆಂದೂ ನಿಷ್ಕ್ರಿಯತೆಯನ್ನು ಹೊಡೆದೋಡಿಸಿ ಸರಕಾರದ ಧೋರಣವನ್ನು ರೂಪಿಸಬೇಕೆಂದೂ ಬಿನ್ನಹ."

ಮೇಲಿನ ತಂತಿಗಳಿಗೆ ಗಾಂಧೀಜಿಯವ ಉತ್ತರಗಳು:—

"ನಿಮ್ಮ ಎಲ್ಲ ಇತ್ಥಂಭೂತ, ಆದರೆ ದುಃಖದಾಯಕ ತಂತಿಗಳು ತಲ್ಪಿದವು. ಹಿರೇನಬಾಬುವಿನಿಂದಲೂ ಬಂದಿವೆ. ದೇಶತ್ಯಾಗ ಇಲ್ಲವೆ ಜಾತ್ಯಂಧತೆಯ ಜ್ವಾಲೆಯಲ್ಲಿ ಮಡಿಯುವದೊಂದೇ ಮಾರ್ಗವೆಂದು ತೋರುತ್ತದೆ. ಯಾವುದನ್ನಾರಿಸಿಕೊಳ್ಳಬೇಕೆಂಬುದನ್ನು ಕುರಿತು ಸಲಹೆಯನ್ನೀಯಲು ನನ್ನ ಆಗಮನವಾಗಬೇಕೆಂದು ನೀವು ಜನರಿಗೆ ಸಲಹೆಕೊಡುವದಿಲ್ಲೆಂದು ಆಶಿಸುತ್ತೇನೆ. ಕೆಲಸಗಾರರ ಕೂಡ ಆಲೋಚನೆಮಾಡಿ ಉಪಾಯಗಳನ್ನು ಕೈಕೊಳ್ಳಿರಿ."

ಬಂಗಾಲ ಶಾಸನ ಸಭೆಯ ಸದಸ್ಯರಾದ ಶ್ರೀ ಹರನಚಂದ್ರ ಘೋಷ ಚೌಧರಿಯವರು ಚೌಮುಹಾನಿಯಿಂದ ೭ ನೇ ದಿನಾಂಕದಲ್ಲಿ ಕಳಿಸಿದ ತಂತಿ ಹೀಗಿದೆ:— "ನವಖಾಲಿಯಲ್ಲಿಯ ಪುನರ್ವಸತಿಯ ಪ್ರಶ್ನೆಯು ಬಿಗಿಯಾಗಹತ್ತಿದೆ. ಕಳವು, ತುಡುಗು, ಸುಲಿಗೆ, ಮನೆಯೊಡೆಯುವದು, ಇರುಳ ದಾಳಿ, ಮನೆ ಸುಡುವದು, ಬಣಿವೆಗಳಿಗೆ ಬೆಂಕಿ ಹಚ್ಚುವದು ಇವೇ ಮೊದಲಾದ ಕೃತಿಗಳು ಸಾಮಾನ್ಯವಾಗಿವೆ. ಕೆಲ ಹೊಲಗಳಲ್ಲಿಯ ಬಿತ್ತಿಗೆಗೆ ಆತಂಕವುಂಟಾಗಿದೆ. ಲೂಟಿ, ಬೆಂಕಿ ಹಚ್ಚುವದು, ಕೊಲೆ, ಸುಲಿಗೆಗಳೇ ಮೊದಲಾದ ಸುಮಾರು ಐದು ನೂರು ಪ್ರಕರಣಗಳಲ್ಲಿ ಸಾಕಷ್ಟು ಪುರಾವೆಗಳಿಲ್ಲೆಂಬ ವರದಿಗಳನು ಕೊಡುವದು ನಡೆದಿದೆ. ಇಂದಿನ ಪ್ರಸಂಗಗಳಲ್ಲಿ ಇವುಗಳಿಗೆ ತುತ್ತಾದವರ ಹೊರತು ಬೇರೆ ಪುರಾವೆಗಳು ದೊರೆಯಲಾರವು. ಓಡಿ ಹೋದ ಆರೋಪಿಗಳು ಡಾಣಾಡಂಗುರವಾಗಿ ಸಭೆಗಳನ್ನು ಕೂಡಿಸುತ್ತ ಅಲೆದಾಡುತ್ತಿರುವರು. ಗಲಭೆಗಳಾದ ಠಾಣೆಗಳಿಂದ ಹಿಂದೂ ಅಧಿಕಾರಿಗಳನ್ನು ವರ್ಗ ಮಾಡಿದ್ದರಿಂದ ಮೂಲ ಪ್ರಕರಣಗಳಲ್ಲಿ ಕದಲು ಬದಲು ಮಾಡುವ ಸಂಶಯ ಬರುತ್ತಿದೆ. ಸಕಾಲಕ್ಕೆ ಆರೋಪಿಗಳ ವಿರುದ್ಧ ಆರೋಪ ಪತ್ರಿಕೆಗಳನ್ನು ಕಳಿಸಿದಂತಹ ಅಧಿಕಾರಿಗಳನ್ನು ವರ್ಗ ಮಾಡಲಾಗಿದೆ. ದಂಗೆಗಳನ್ನು ಬಗ್ಗುಬಡಿಯಲು ಯತ್ನಿಸಿದ ಅಥವಾ ಆರೋಪಿಗಳಲ್ಲಿ ಬಹುಜನರನ್ನು ಸೆರೆಯಲ್ಲಿಟ್ಟ ಅಧಿಕಾರಿಗಳ ವಿರುದ್ಧ ಪ್ರಕರಣಗಳನ್ನೆಬ್ಬಿಸಲಾಗಿದೆಯಲ್ಲದೆ ಆರೋಪಿಗಳಲ್ಲಿ ಬಹುಜನರನ್ನು ಜಾಮೀನಿನ ಮೇಲೆ ಬಿಡಲಾಗಿದೆ. ಹಿಂದೂ ಪೋಲೀಸರ ವಿರುದ್ಧ ಹಾಗೂ ಕೆಲಸಗಾರರ ವಿರುದ್ಧ ಮತ್ತು ಸೈನಿಕರ ವಿರುದ್ಧ ನೂರಾರು ಪ್ರತಿಪ್ರಕರಣಗಳ ವಿಚಾರಣೆ ನಡೆದಿದೆ. ಕೆಲಪ್ರಕರಣಗಳಲ್ಲಿಯಂತೂ ಅವರಿಗೆ ತೊಂದರೆ ಕೊಡಲಾಗುತ್ತಿದೆ.

ಮೇಲಿನ ತಂತಿಗೆ ಗಾಂಧೀಜಿಯವರ ಉತ್ತರ—

"ನೀವು ಹೇಳುವದು ನಿಜವಿದ್ದರೆ ದೇಶತ್ಯಾಗಕ್ಕೆ ಅಥವಾ ಜಾತ್ಯಂಧತೆಯ ಇಲ್ಲವೆ ಹುತನದ ಜ್ವಾಲೆಯಲ್ಲಿ ನಷ್ಟವಾಗುವದಕ್ಕೆ [illegible] ಸೂಚನೆಯಿದು. ಸತೀಶ ಬಾಬುಗಳ [illegible] ಆಲೋಚನೆ ಮಾಡಿರಿ ಮತ್ತು [illegible] ಉಪಾಯ ಕೈಕೊಳ್ಳಿರಿ." [illegible] ಬೇಕೆಂದು

ಬಂಗಾಲದ ಮುಖ್ಯ ಮಂ[illegible] ಎಸ್. ಸುಹ್ರವರ್ದಿಯವರಿಗೆ ಸಪ್ತಾಹದ [illegible] ಕಳಿಸಿದ ತಂತಿ. [illegible]ಕರ ವ್ಯಾಖ್ಯಾನ

ನವಖಾಲಿಯಲ್ಲಿಯ [illegible] ಮೇಲೆ ನಡೆದುವು. ಹೆಚ್ಚೆಚ್ಚು ದುಃಖಪಾತ್ರಯಜ್ಞ ನಡೆಯಿತು. ವೆ. ಸತೀಶಚಂದ್ರ ಪಂದ್ಯಾಟದಲ್ಲಿ ಯಶಸ್ವಿ ಬೇಗ ಗಮನ ಸ್ಥಾನ ದೊರೆತವು. ಗಡೆ ಮಾಡ

## ಕರ್ನಾಟಕ ವಿಶ್ವವಿದ್ಯಾಲಯ

ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆಯ ಪ್ರಶ್ನೆಯನ್ನು ಕುರಿತು ವರದಿ ಮಾಡಲು ಮುಂಬಯಿ ಸರಕಾರವು ಸ್ವಾ. ನಾರಾಯಣರಾವ ಜೋಶಿಯವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿದೆ.

ಡಾ. ವಿ. ಆರ್. ವಿ. ರಾವ, ದ. ಪ. ಕರಮರಕರ, ಆರ್. ಎ. ಜಾಗೀರದಾರ ಎ. ಎ. ಕಿತ್ತೂರ, ರಂಗರಾವ ದಿವಾಕರ, ಎಸ್. ಎಸ್. ಬಸವನಾಳ, ಕೆ. ಆರ್. ಹಳದೀಪುರ, ಜ. ಪರಮಶಿವಯ್ಯ, ಡಾ. ಎಸ್. ಸಿ. ನಂದಿಮಠ, ಬಿ. ಎನ್. ದಾತಾರ, ಎಲ್ ಎಂ. ಎ. ಮೆನೆಝಿಸ್, (ಸದಸ್ಯ—ಕಾರ್ಯದರ್ಶಿ) ಇವರು ಈ ಸಮಿತಿಯ ಇತರ ಸದಸ್ಯರಾಗಿದ್ದಾರೆ.

ಈ ಸಮಿತಿಯು (೧) ಕರ್ನಾಟಕ ವಿಶ್ವವಿದ್ಯಾಲಯದ ಸ್ವರೂಪ, ವ್ಯಾಪ್ತಿ, ಘಟನೆ ಮತ್ತು ಅಧಿಕಾರ ಕ್ಷೇತ್ರಗಳ ಬಗ್ಗೆ ಹಾಗೂ ಕರ್ನಾಟಕ ವಿಶ್ವವಿದ್ಯಾಲಯವು ಮುಂಬಯಿ ಪ್ರಾಂತದ ಹೊರಗಿನ ಶಿಕ್ಷಣ ಸಂಸ್ಥೆಗಳನ್ನು ಸೇರಿಸಿಕೊಳ್ಳುವ ಬಗ್ಗೆ (೨) ಈ ವಿಶ್ವವಿದ್ಯಾಲಯದ ಸ್ಥಾಪನೆ ಮತ್ತು ರಕ್ಷಣೆಯ ವೆಚ್ಚ ಮತ್ತು ಅದಕ್ಕೆ ಬೇಕಾಗುವ ಹಣವನ್ನು ಹೇಗೆ ಕೂಡಿಸಬೇಕೆಂಬ ಬಗ್ಗೆ (೩) ಈ ವಿಷಯಕ್ಕೆ ಸಂಬಂಧಿಸಿದ ಇತರ ವಿಷಯಗಳ ವರದಿ ಮಾಡಬೇಕಾಗಿದೆ.

## ಒಂದೇ ಜಗತ್ತಿಗಾಗಿ ಹೆಣಗಿರಿ

(೭ನೇ ಪುಟದಿಂದ ಬಂದುದು)

ಆಂಗ್ಲ ಮಹಾಶಯನು ದೇವರನ್ನು ತಿಳಿಯುವದು ಅಶಕ್ಯವೆಂಬುದರಲ್ಲಿ ವಿಶ್ವಾಸವಿಡಲು ನನಗೆ ಕಲಿಸಿದನು; ದೇವರನ್ನು ತಿಳಿಯಬಹುದು ಅಂದರೆ ನಮ್ಮ ಮರ್ಯಾದಿತ ಬುದ್ಧಿಶಕ್ತಿಯಿಂದ ಅವನನ್ನು ಎಷ್ಟು ತಿಳಿಯುವದು ಸಾಧ್ಯವಿದೆಯೋ ಅಷ್ಟೇ ತಿಳಿಯಬಹುದು.

ಏಶಿಯಾದ ವಿವಿಧ ಭಾಗಗಳಿಂದ ನೀವೆಲ್ಲರು ಬಂದಿದ್ದಿರಿ. ಇದೇ ಪ್ರಕಾರ ಇಷ್ಟೇ ಉತ್ಸಾಹದಿಂದ ವರ್ಷಕ್ಕೊಮ್ಮೆ ಎರಡು ಅಥವಾ ಮೂರು ವರ್ಷಗಳಿಗೊಮ್ಮೆ ಇಂಥ ಪರಿಷತ್ತು ನೆರೆಯಬೇಕು. ಈ ಪರಿಷತ್ತಿನ ಸವಿನೆನಪುಗಳನ್ನು ನಿಮ್ಮ ಸಂಗಡ ಒಯ್ಯಿರಿ. ಸತ್ಯದ ಮಹಾ ಕಟ್ಟಡ ಕಟ್ಟುವದಕ್ಕಾಗಿ ಎಲ್ಲ ವಿಧದಲ್ಲಿಯೂ ಪ್ರಯತ್ನಿಸಿರಿ.

### ಬಲಾತ್ಕಾರವು ಸದುದ್ದೇಶವಲ್ಲ

ಇಲ್ಲಿ ಏಶಿಯದ ಎಲ್ಲ ಪ್ರತಿನಿಧಿಗಳೂ ಸೇರಿದ್ದಿರಿ ಏಕೆ? ಯುರೋಪದ ವಿರುದ್ಧ ಯುದ್ಧ ಹೂಡಲ್ಕು? ಅಮೇರಿಕಾ ಅಥವಾ ಏಶಿಯೇತರ ಜನರ ಮೇಲೆ ಏರಿ ಹೋಗಲು? "ಅಲ್ಲ ಎಂದೂ ಅಲ್ಲ" ಎಂದು ಒತ್ತಿ ಹೇಳುವೆ. ಇದು ಹಿಂದುಸ್ತಾನದ ರೀತಿಯಲ್ಲ. ಅಹಿಂಸಾತ್ಮಕ ಹೋರಾಟದಿಂದ ಸ್ವರಾಜ್ಯವನ್ನು ಗಳಿಸಿಕೊಂಡು ಆ ಸ್ವರಾಜ್ಯದ ಬಲದಿಂದ ಹಿಂದುಸ್ತಾನವು ಬೇರೆ ದೇಶಗಳ ಮೇಲೆ ಆಕ್ರಮಣ ಮಾಡಿದರೆ ನನಗೆ ಬಹಳ ದುಃಖವಾಗುವದು. ಯುರೋಪಿಯನ್ನರು ಏಶಿಯಾ ಖಂಡದ ವಿವಿಧ ಜನಾಂಗಗಳನ್ನು ಸುಲಿದಿದ್ದಾರೆ.

ಏಶಿಯಾ ಬಾಳುವದು. ಪಶ್ಚಿಮಾತ್ಯ ರಾಷ್ಟ್ರಗಳಷ್ಟೇ ಸ್ವತಂತ್ರವಾಗಿ ಅದು ಬಾಳಬೇಕು ಎಂದು ನಿರ್ಧಾರ ಮಾಡದೇ ನಾವು ಇಲ್ಲಿಂದ ಎದ್ದು ಹೋದರೆ ಪರಿಷತ್ತು ನಿಷ್ಫಲವಾದಂತೆ ಸೈ. ಪರಿಷತ್ತು ನಿಯಮಿತವಾಗಿ ನೆರೆಯಬೇಕೆಂದು ಈಗ ಹೇಳಿದೆ. ಎಲ್ಲಿ ಎಂದು ಕೇಳಿದರೆ, ಹಿಂದುಸ್ತಾನವೇ ಅದಕ್ಕೆ ತಕ್ಕ ಸ್ಥಳವೆಂದು ಉತ್ತರಕೊಡುವೆ.

## ಅಂತರ್ರಾಷ್ಟ್ರೀಯ

[೫ ನೇ ಪುಟದಿಂದ]

ಜರ್ಮನ್ ಫ್ಯೂರರನ ಮುಂದೆ ನಾಜೀ ಜನಜಂಗುಳಿ ನಡೆಸುತ್ತಿದ್ದ ಉನ್ಮತ್ತ ಪ್ರದರ್ಶನಗಳಂಥ ಪ್ರದರ್ಶನಗಳೇ ಡಿಗಾಲೆಯ ಸಮ್ಮುಖದಲ್ಲೂ ನಡೆದವು. ಅವನ ಉನ್ಮತ್ತ ಬೆಂಬಲಿಗರು "ಡಿಗಾಲೆಗೆ ಅಧಿಕಾರ" ಎಂದು ಬೊಬ್ಬಿರಿಯುತ್ತ ಊರಲ್ಲೆಲ್ಲ ಅಡ್ಡಾಡಿ ವಿರೋಧ ಪಕ್ಷದವರನ್ನು ಹಿಂಸಿಸಿದರು. ಡಿಗಾಲೆ ಸ್ವಭಾವದಿಂದ ಅಧಿಕಾರಪ್ರಿಯ. ಅವನಿಗೆ ಅನೇಕ ಹಣಗಾರರೂ ಕೆಲ ಸೇನಾಧಿಕಾರಿಗಳೂ — ಉದಾಹರಣೆಗಾಗಿ ಇಂಡೋಚೀನದ ಸ್ವಾತಂತ್ರ್ಯ ಚಳವಳಿಯನ್ನು ಹತ್ತಿಕ್ಕಲು ಹೋದ ನೌಕಾಪತಿ ಅರ್ಗೆನ್ಲೂ — ಬೆಂಬಲಿಗರಾಗಿದ್ದಾರೆ. ಕಮ್ಯುನಿಸ್ಟರಷ್ಟೇ ಅವನಿಗೆ ಸಬಲ ವಿರೋಧ ಪೂರ್ಣ ಬಲ್ಲ ನಿಶ್ಚಿತ ಆರ್ಥಿಕ ಧೋರಣ ವುಳ್ಳ ಪಕ್ಷ. ಅವರಿಗೆ ಹೆದರಿ ನಡುಗುವವರನ್ನೆಲ್ಲ ಒಂದುಗೂಡಿಸಿ ಸಾಮ್ಯವಾದಿಗಳನ್ನು ಕಮ್ಯುನಿಸ್ಟರಿಂದ ಪ್ರತ್ಯೇಕಿಸಿ ಕಮ್ಯುನಿಸ್ಟರನ್ನು ಬಗ್ಗುಬಡಿಯಬೇಕೆಂದೂ ಆಮೇಲೆ ಒಳಸಂಚಿನಿಂದಾದರೂ ಅಧಿಕಾರ ಗ್ರಹಣ ಮಾಡಬೇಕೆಂದೂ ಡಿಗಾಲೆಯ ಹೊಂಚಿದ್ದಂತೆ ಕಾಣುತ್ತದೆ. ಅವನು ಸಾಮ್ಯವಾದಿ ಕಮ್ಯುನಿಸ್ಟ ಎಂ ಅರ್ ಪಿ ಕೂಟವನ್ನು ಕಿತ್ತೊಗೆಯಿರಿ, ಎಂದು ಜನತೆಗೆ ಬೋಧಿಸಿದನು. ಪ್ರತಿ ನಗರದಲ್ಲಿಯೂ ಅವನ ಪ್ರಚಾರಕರು ಕೆಲಸ ಮಾಡುವರು. ಈಗಾಗಲೆ ಫ್ರೆಂಚ ರಾಷ್ಟ್ರೀಯ ಸಭೆ (ಪಾರ್ಲಿಮೆಂಟ) ಯಲ್ಲಿ ೧೬೫ ಸದಸ್ಯರ ಬೆಂಬಲ ಅವನಿಗೆ ದೊರೆಯುವ ಸಂಭವವಿದೆಯಂತೆ. ಅಧಿಕಾರವನ್ನು ದೊರಕಿಸಿಕೊಳ್ಳುವದರಲ್ಲಿ ಅವನು ಯಶಸ್ವಿಯಾದರೆ ೧೯೩೧ ರಲ್ಲಿ ಜರ್ಮನಿಯಲ್ಲುಂಟಾದ ಪರಿಸ್ಥಿತಿಯೇ ನಿರ್ಮಿತವಾಗುವಲ್ಲಿ ಸಂದೇಹವಿಲ್ಲ. ಅದರ ಅಪರಿಹಾರ್ಯ ಫಲವೆಂದರೆ ಫ್ರಾನ್ಸಿನಲ್ಲಿ ಫ್ಯಾಸಿಸ್ಟ ಮಾದರಿಯ ಸರ್ವಾಧಿಕಾರದ ಸ್ಥಾಪನೆ.

### ಫ್ರೆಂಚರಿಗೆ ಹೊಸ ತಲೆನೋವು

ಗೃಹರಂಗದಲ್ಲೇ ಸಾಕಷ್ಟು ಆರ್ಥಿಕ, ರಾಜಕೀಯ ತೊಡಕುಗಳಿಂದ ಪೀಡೆಪಡುತ್ತಿರುವ ಫ್ರಾನ್ಸಿಗೆ, ಸಾಮ್ರಾಜ್ಯದ ನುಂಗಲಾರದ ಉಗುಳಲಾರದ ಬಿಸಿ ತುಪ್ಪವೂ ಗಂಟು ಬಿದ್ದಿದೆ. ಇಂಡೋಚೀನದಲ್ಲಿ ವಿಟನಾಮ ಪ್ರತಿಭಟನೆ ಇನ್ನೂ ತಗ್ಗದಿರುವಾಗಲೆ ಮಡಗಾಸ್ಕರದ ಮೂಲ ನಿವಾಸಿಗಳು ಸ್ವಾತಂತ್ರ್ಯಕ್ಕಾಗಿ ದಂಗೆಯೆದ್ದರು. ಅವರ ಪ್ರತಿಭಟನೆಯನ್ನು ಮುರಿಯಲಾಗಿದೆಯೆಂದು ಫ್ರೆಂಚ ಸರಕಾರ ಕೊಚ್ಚಿಕೊಂಡರೂ ಆ ಚಳವಳಿ ಇನ್ನೂ ಮುರಿಯಲ್ಪಟ್ಟಿಲ್ಲವೆಂಬುದು ಮಡಗಾಸ್ಕರದಿಂದ ಬರುವ ಹೊಸ ಹೊಸ ಸುದ್ದಿಗಳಿಂದ ವ್ಯಕ್ತವಾಗುತ್ತದೆ. ಕಮ್ಯುನಿಸ್ಟರೂ ಇತರ ಕೆಲವರೂ ಮಡಗಾಸ್ಕರದ ನಿವಾಸಿಗಳ ಈ ಸ್ವಾತಂತ್ರ್ಯಾಪೇಕ್ಷೆಗೆ ಸಹಾನುಭೂತಿ ತೋರುತ್ತಿದ್ದಾರೆ. ಈ ಸುದ್ದಿಯ ಬಿಸಿ ಆರದೆ ಇರುವಾಗಲೆ ಉತ್ತರ ಆಫ್ರಿಕೆಯಿಂದ ಕೆಟ್ಟ ಸುದ್ದಿ ಬಂತು. ಅಲ್ಜೀರಿಯಾದ ಫ್ರೆಂಚ ಅಧಿಕಾರಿಗಳು ಪರಿಸ್ಥಿತಿ ಗಂಭೀರವಾಗಿದೆಯೆಂದು ತಂತಿ ಕಳಿಸಿದ್ದಾರೆ. ಅಲ್ಲಿಯೂ ಸ್ವಾತಂತ್ರ್ಯ ಚಳವಳಿ ಎದ್ದಿದ್ದು ಫ್ರಾನ್ಸಿನ ಆಂತರಿಕ ಮಂತ್ರಿ ಅಲ್ಲಿ ಸಂಚರಿಸಿ ಬಂದನು. ರಾಜಕೀಯ ಸುಧಾರಣೆಗಳ ಆಸೆ ತೋರಿಸಿ ಆ ಜನರನ್ನು ಸಂತೈಸಲು ಯತ್ನಿಸಲಾಗಿದೆ. ಅಷ್ಟರಲ್ಲೆ ಫ್ರೆಂಚ ಮೊರೊಕೋದ ಸುಲ್ತಾನನೂ ಸ್ವಾತಂತ್ರ್ಯದ ಪಲ್ಲವಿಯೆತ್ತಿದ್ದಾನೆ. ಫ್ರೆಂಚರ "ರಕ್ಷಕ"ತ್ವದಲ್ಲಿರುವ ಈ ಪ್ರದೇಶದ "ರಕ್ಷಕತ್ವ" ಒಪ್ಪಂದದ ಅವಧಿ ಈಗ ಮುಗಿಯ ಬಂದಿರುವದರಿಂದ ಅರಬ ರಾಷ್ಟ್ರಗಳೊಡನೆ ಅಧಿಕ ಸಂಬಂಧ ಬೆಳೆಸುವ ಆಸೆ ಸುಲ್ತಾನನಿಗಾಗಿದೆ. ಮೊರೊಕೋಗೆ ಫ್ರೆಂಚ ಒಕ್ಕೂಟದಲ್ಲುಳಿಯಬೇಕೆಂದು ಅವಿಚ್ಛ ತೋರಲಾಗುತ್ತಿದೆ. ಅಂತೂ ಫ್ರೆಂಚರ ಸಾಮ್ರಾಜ್ಯ ಕುಸಿಯ ಬಂದಿದೆ. ಬ್ರಿಟಿಶರಂತೆ ಬೇಗನೆ ಬುದ್ಧಿವಂತರಾಗುವ ಲಕ್ಷಣವನ್ನು ಮಾತ್ರ ಅವರು ತೋರಿಸುತ್ತ ಇಲ್ಲ.

### ಪೋರ್ತುಗಾಲದಲ್ಲಿ ಸಂಪು

ಪೋರ್ತುಗಾಲದ ಸಾಲಾಝಾರ ಸರಕಾರಕ್ಕೆ ಸರ್ವ ಕ್ಷೇಮವಿಲ್ಲೆಂದು ಹೆಚ್ಚು ಹೆಚ್ಚು ನಿಚ್ಚಳ [illegible] ಆರೆಫ್ಯಾಸಿಸ್ಟ ಸರ್ವಾಧಿಕಾರಿಯ ಕಾಲುಗಳು ನಡುಗುವಂತಾಗಿದೆ. ಕೆಲ ವಾರಗಳ ಹಿಂದೆ ಕೆಲ ಸೈನ್ಯಾಧಿಕಾರಿಗಳು ದಂಗೆಯೆದ್ದರೆಂದು ಸುದ್ದಿ ಬಂದಿತ್ತು. ಈಗ ಲಿಸ್ಬನ್ (ಪೋರ್ತಗೀಸ ರಾಜಧಾನಿ) ನಲ್ಲಿ ಧಕ್ಕೆ ಕೂಲಿಕಾರರು ಎರಡು ವಾರದಿಂದ ಸಂಪು ಹೂಡಿದ್ದಾರೆ. ಈ ಸಂಪು ಆಕಾರಣವೆಂದೂ ಅಂತರ್ರಾಷ್ಟ್ರೀಯ ಕಮ್ಯುನಿಸ್ಟ ಪ್ರಚೋದಿತವೆಂದೂ ಹೇಳಿ ಸರಕಾರ ತೀಕ್ಷ್ಣ ದಬ್ಬಾಳಿಕೆಯನ್ನು ಕೈಕೊಂಡಿದ್ದರೂ ಸಂಪುಗಾರ ಪ್ರತಿನಿಧಿಗಳ ಬಂಧನವಾದ ನಂತರ ಬೇರೆ ಕಾರ

# ಕರ್ನಾಟಕ

### ಬೆಳಗಾವಿ

ಪ್ರಾಂತಾಧ್ಯಕ್ಷರಾದ ಶ್ರೀ ಎಸ್. ನಿಜಲಿಂಗಪ್ಪನವರು ಹುಕ್ಕೇರಿ ತಾಲೂಕಿನಲ್ಲಿ ಸಂಚರಿಸಿ ಚಿಕ್ಕೋಡಿ ತಾಲೂಕಿನ ನಿಪ್ಪಾಣಿ ಮೊದಲಾದ ಭಾಗಗಳನ್ನು ಸಂದರ್ಶಿಸಿದರು. ನಿಪ್ಪಾಣಿಯಲ್ಲಿ ವ್ಯಾಪಾರಸ್ಥರು ಎರಡೇ ಗಂಟೆಗಳಲ್ಲಿ ೧೦೮೦ ರೂಪಾಯಿ ನಿಧಿ ಸಂಗ್ರಹಿಸಿ ಕೊಟ್ಟರು. ಕರ್ಲಿಯಲ್ಲಿ ೬೮ ರೂ. ಸದಲಿಗೆಯಲ್ಲಿ ೨೦೨ ರೂ. ತಕ್ಷಣ ಕೂಡಿದವು. ೫ ಸಾವಿರ ರೂಪಾಯಿಗಳ ವಾಗ್ದಾನಗಳು ದೊರೆತಿವೆ.

ಸವದತ್ತಿಯಲ್ಲಿ ರವಿವಾರ ೧೩ನೇ ತಾರೀಕು ಅ. ರಜಿಸ್ಟ್ರಾರ ಶ್ರೀ ಪಾಟೀಲರ ಅಧ್ಯಕ್ಷತೆಯಲ್ಲಿ ಸಹಕಾರಿ ಸಂಘಗಳ ಸೆಕ್ರೆಟರಿಗಳ ಪರಿಷತ್ತು ಸೇರಿದ್ದಿತು. ಸ್ವಾಗತಾಧ್ಯಕ್ಷರಾದ ಶ್ರೀ ಬಿ. ಎಂ. ಕಡಕೋಳ ಇವರು ಸೆಕ್ರೆಟರಿಗಳ ನೌಕರಿಯ ಅನಿಶ್ಚಿತತೆ ತೀರ ಅಲ್ಪಪ್ರಮಾಣ ಸಂಬಳ ಪ್ರಾವಿಡೆಂಟ ಫಂಡಿನ ಯೋಜನೆಯ ಅಭಾವ ಮೊದಲಾದವುಗಳ ಬಗ್ಗೆ ತಿಳಿಸಿ ಹೇಳಿ ಸೆಕ್ರೆಟರಿಗಳಿಗೆ ನೆರವಾಗಬೇಕೆಂದು ಬಿನ್ನವಿಸಿಕೊಂಡರು. ಈ ಧೋರಣೆಗನುಸಾರವಾಗಿ ೯ ಬೇರೆ ಬೇರೆ ಗೊತ್ತುಗಳು ಪಾಸಾಗಿ ಅಲ್ಪೋಪಹಾರದೊಂದಿಗೆ ಕಾರ್ಯಕ್ರಮ ಕೊನೆಗಂಡಿತು.

ಬೆಳಗಾವಿಯ ಪ್ರಸಿದ್ಧ ವ್ಯಾಪಾರಸ್ಥರಾದ ಶ್ರೀ ರಾಮಭಾವೂ ಮುರಕುಂಬಿಯವರು ೧೧ ನೆ ತಾರೀಕು ಶುಕ್ರವಾರ ಮುಂಜಾನೆ ೮ ಗಂಟೆಗೆ ರಕ್ತಸ್ರಾವದಿಂದ ನಿಧನ ಹೊಂದಿದರೆಂದು ತಿಳಿಸಲು ವಿಷಾದಿಸುತ್ತೇವೆ.

ಬೆಳಗಾವಿ ನಗರಕ್ಕೆ ಗುಮಾಸ್ತ ಕಾಯಿದೆ ಅನ್ವಯಿಸಲಾಗಿದೆ. ಹಾಟೆಲ್ ಕಾಮಗಾರ ಸಂಘದ ಅಧ್ಯಕ್ಷರು ಈ ಬಗ್ಗೆ ಸರಕಾರಕ್ಕೆ ಬಿನ್ನವಿಸಿಕೊಂಡಿದ್ದರು. ೧೫ ನೇ ಮಾರ್ಚದಿಂದ ಈ ಕಾಯಿದೆ ಬೆಳಗಾವಿ ನಗರಕ್ಕೆ ಅನ್ವಯಿಸಲಾಗಿದೆಂದು ಸರಕಾರದಿಂದ ಅಧಿಕೃತ ತಿಳಿದುಬಂದಿದೆ.

---

ಕೊಲ್ಹಾಪುರದ ಹೊಸ ಛತ್ರಪತಿಗಳ ದತ್ತಕ ವಿಧಾನಕ್ಕಾಗಿ ೨ ಲಕ್ಷ ರೂಪಾಯಿಗಳ ವೆಚ್ಚ ಬಂದಿದ್ದು ಜೂನದಲ್ಲಿ ಆಗಲಿರುವ ರಾಜ್ಯಾಭಿಷೇಕ ಸಮಾರಂಭಕ್ಕಾಗಿ ೧೦ ಲಕ್ಷ ರೂಪಾಯಿಗಳನ್ನು ತೆಗೆದಿಡಲಾಗಿದೆಂದು ತಿಳಿಯುತ್ತದೆ.

---

ಖಾನೆಗಳಿಗೂ ಸಂಪು ಹಬ್ಬಿದ್ದು ಕಾಣಬರುತ್ತಿದೆ. ಸಂಪುಗಾರರು ಕೆಲ ಕಾಲ ತಾಳಬಲ್ಲರಾದರೆ ಸಂಪು ಸಾರ್ವತ್ರಿಕವಾಗಿ ಸಾಲಾಝಾರನ ಸರ್ವಾಧಿಕಾರ ಕೊನೆಗೊಳ್ಳಬಹುದೆಂದು ನಂಬಲಾಗಿದೆ.

### ಹೊರನಾಡ ಹಿಂದೀಯರ ತೊಂದರೆಗಳು

ಅಮೇರಿಕೆಯ ಕೆಲಿಫೋರ್ನಿಯಾದಲ್ಲಿರುವ ಮೂವತ್ತು ಜನ ಹಿಂದೀ ಒಕ್ಕಲಿಗರು ಜುಲೈ ೧ಕ್ಕೆ ಅಮೇರಿಕೆಯಿಂದ ಹೊರತಳ್ಳಲ್ಪಡುವ ಗಂಡಾಂತರವುಂಟಾಗಿದೆ. ಈ ಹಿಂದೀಯರು ೨೦ ವರ್ಷಕಾಲ ಅಮೇರಿಕೆಯಲ್ಲಿ ವಾಸಿಸಿದ್ದಾರೆ. ಆದರೆ ೧೯೨೪ ರ ನಂತರ ಇವರು ಕಾಯದೆ ವಿರುದ್ಧ ಅಮೇರಿಕೆಯಲ್ಲಿ ಪ್ರವೇಶಿಸಿದವರಾದುದರಿಂದ ಅವರನ್ನು ಹೊರಗೆ ಹಾಕಲಾಗುವದೆಂದು ವಲಸೆ ಅಧಿಕಾರಿಗಳು ನೋಟೀಸು ಕೊಟ್ಟರು. ಅವರ ಮೊರೆ ಕೇಳಿ ಕನಿಷ್ಠ ೭ ವರ್ಷ ಕಾಲ ಅಮೇರಿಕೆಯಲ್ಲಿ ಯೋಗ್ಯ ವರ್ತನೆಯಿಂದ ವಾಸಿಸುತ್ತಿರುವ ವಿದೇಶೀಯರಿಗೆ ನಾಗರಿಕತ್ವವನ್ನೀಯುವ ಒಂದು ಮಸೂದೆ ಶಾಸನ ಸಭೆಯಲ್ಲಿ ತರಲ್ಪಟ್ಟಿದೆ. ಹಿಂದೀ ಲಾಯಭಾರಿ ಅಸಫಅಲ್ಲಿಯವರೂ ಅವರಿಗಾಗಿ ಪ್ರಯತ್ನ ನಡೆಸಿದ್ದಾರೆ. ಆದರೆ ಶಾಸನ ಸಭೆ ಆ ಮಸೂದೆಯನ್ನು ತಿರಸ್ಕರಿಸಿದರೆ ಈ ಹಿಂದೀಯರು ಹೊರಬೀಳಬೇಕಾಗುವದು.

* * *

ಈ ವರೆಗೆ ಹಿಂದೀಯರ ವಿರುದ್ಧ ಘೆಟ್ಟೋ ಕಾಯದೆ (ಪ್ರತ್ಯೇಕಿಸಿದ ಕೇರಿಗಳ ನಿರ್ಮಾಣ) ಇಲ್ಲದಿದ್ದ ದಕ್ಷಿಣ ಆಫ್ರಿಕೆಯ ಕೇಪಟೌನ ಪ್ರಾಂತದಲ್ಲೂ ಅಂಥ ಕಾಯದೆ ತರುವ ಪ್ರಯತ್ನವನ್ನು ಶಾಸನಸಭೆಯ ಸದಸ್ಯರೊಬ್ಬರು ನಡೆಸಿದ್ದಾರೆ. ಕೇಪಟೌನ್‌ನಲ್ಲಿ ಹಿಂದೀಯರು ಆಸ್ತಿ ಕೊಳ್ಳುವದು ಹೆಚ್ಚಾಗಿದ್ದರಿಂದ ಯುರೋಪಿಯನ್ನರನ್ನು ಹಿಂದೀಯರ ಆಕ್ರಮಣದಿಂದ ರಕ್ಷಿಸಬೇಕಾಗಿದೆಯೆಂದು ಅವರು ವಾದಿಸಿದರು!

### ಧಾರವಾಡ

ಮುಂಬಯಿ ಕರ್ನಾಟಕದಲ್ಲಿ ಗ್ರಂಥಾಲಯ ಪ್ರಚಾರಕಾರ್ಯ ಕೈಕೊಳ್ಳುವ ಉದ್ದೇಶದಿಂದ ಗ್ರಂಥಾಲಯಗಳ ಪಟ್ಟಿಯೊಂದನ್ನು ತಯಾರಿಸುವ ಕಾರ್ಯ ಕೈಕೊಳ್ಳಬೇಕಾಗಿದೆ. ಆದುದರಿಂದ ಗ್ರಂಥಾಲಯದ ಹೆಸರು, ಸಂಚಾಲಕರ ಹೆಸರು ವಿಳಾಸ ಮತ್ತು ವಿಶೇಷ ವಿವರಗಳೇನಾದರೂ ಇದ್ದರೆ ಅದನ್ನು ಆದಷ್ಟು ಬೇಗನೆ ಗೌರವ ಕಾರ್ಯದರ್ಶಿ ಕರ್ನಾಟಕ ಗ್ರಂಥಾಲಯ ಕ. ವಿ. ವರ್ಧಕ ಸಂಘ ಧಾರವಾಡ ಮತ್ತು ಶ್ರೀ ಅರ್. ವಿ. ಕರ್ಡಿಕ್ಯುರೇಟರ ಆಫ ಲಾಯಬ್ರರೀಜ ಗವರ್ನಮೆಂಟ ಲಾ ಕಾಲೇಜ ಫೋರ್ಟ ಮುಂಬಯಿ ಇವರಿಗೆ ಕಳಿಸಬೇಕು.

ದಕ್ಷಿಣ ಸಂಸ್ಥಾನಗಳಿಂದ ಘಟನಾ ಸಮಿತಿಗೆ ಇಬ್ಬರು ಪ್ರತಿನಿಧಿಗಳನ್ನು ಕಳಿಸಬೇಕೆಂದು ಗೊತ್ತಾಗಿದ್ದು ಅದರಲ್ಲಿ ಒಬ್ಬನಾದರೂ ಕನ್ನಡಿಗನಿರಬೇಕಾದುದು ನ್ಯಾಯ್ಯ ಮತ್ತು ಅವಶ್ಯವಾಗಿದೆಂದು ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಸಮಿತಿಯ ಅಧ್ಯಕ್ಷರಾದ ಶ್ರೀ ನಿಜಲಿಂಗಪ್ಪನವರು ಪ್ರಕಟನೆಯನ್ನು ಹೊರಡಿಸಿ ಅಭಿಪ್ರಾಯ ವ್ಯಕ್ತ ಮಾಡಿದ್ದಾರೆ.

ಹಾವೇರಿ ನಗರ ಸಭೆಯ ಸದಸ್ಯರಾಗಿ ಆರಿಸಲ್ಪಟ್ಟ ಶ್ರೀ ವೆಂಕಟರಾವ ಚವಟಿಯವರ ಆಯ್ಕೆ ವಿರುದ್ಧ ಮಾಡಿದ ಅರ್ಜಿಯಲ್ಲಿ ಅವರ ಆಯ್ಕೆ ರದ್ದಾಗಿ ಶ್ರೀ ದೇಶಪಾಂಡೆಯವರು ಆರಿಸಿ ಬಂದರೆಂದು ಜಿಲ್ಹಾ ನ್ಯಾಯಾಧೀಶರು ತೀರ್ಪು ಕೊಟ್ಟರು.

ಧಾರವಾಡದ ಅಸಿಸ್ಟಂಟ ಸ್ಟೇಶನ ಮಾಸ್ತರ ಎಚ್. ಎಸ್. ವೆಂಕೋಬರಾವ ಇವರು ೬ ರೂಪಾಯಿ ಲಂಚ ತೆಗೆದುಕೊಂಡರೆಂಬ ಆರೋಪದ ಮೇಲೆ ಆ್ಯಡಿಶನಲ್ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟರು ೫೦೦ ರೂ. ದಂಡ, ದಂಡ ಕೊಡದಿದ್ದರೆ ೬ ತಿಂಗಳ ಸಾದಾ ಶಿಕ್ಷೆಯನ್ನು ವಿಧಿಸಿದ್ದರು. ಜಿಲ್ಹಾ ನ್ಯಾಯಾಧೀಶರಲ್ಲಿ ಅಪೀಲ ಮಾಡಲಾಗಿ ಆರೋಪಿಗಳು ನಿರ್ದೋಷಿಗಳೆಂದು ತೀರ್ಪು ಕೊಡಲಾಯಿತು.

ಧಾರವಾಡ ಜಿಲ್ಹಾ ಲೋಕಲ್ ಬೋರ್ಡಿಗೆ ನಿವೃತ್ತ ಅಧ್ಯಕ್ಷ ಶ್ರೀ ಬಿ. ಆರ್. ತಂಬಾಕದ ಇವರು ಮತ್ತೆ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಅವರಿಗೆ ೨೬ ಮತಗಳು ವಿರುದ್ಧ ಉಮೇದವಾರ ಬಿ. ಸಿ. ಪಾಟೀಲರಿಗೆ ೧೮ ಮತಗಳು ಬಿದ್ದವು. ಬಿ. ಸಿ. ಪಾಟೀಲರು ಅಧಿಕೃತ ಕಾಂಗ್ರೆಸ್ ಉಮೇದ್ವಾರರು. ಶ್ರೀ ತಂಬಾಕದರೂ ಕಾಂಗ್ರೆಸ್ ತಿಕೀಟಿನಿಂದ ಆರಿಸಿ ಬಂದವರು.

### ವಿಜಾಪುರ

ಬಾಗಲಕೋಟೆಯಲ್ಲಿ ೧೧ ನೇ ತಾರೀಕು ಆಹಾರ ಸಮಿತಿಯ ಸಭೆ ಸೇರಿ ಉರುವಲು ಕಟ್ಟಿಗೆಯ ಬಗ್ಗೆ ಬೆಲ್ಲದ ಬಗ್ಗೆ ಮತ್ತು ಜೆಣಿಕ್ಕೆ ಹತ್ತಿವ ಅರಿವೆ ಬಗ್ಗೆ ವಿಚಾರ ನಡೆದು ಉಪಯುಕ್ತ ಸೂಚನೆಗಳನ್ನೊಳಗೊಂಡ ಗೊತ್ತುಗಳು ಪಾಸಾದುವು.

ಬಾಗಲಕೋಟೆಯಲ್ಲಿಯ ಕಚ್ಛಿ ಓಸ್ವಾಲ ಸಮಾಜದ ಆಂಗ್ಲ-ಗುಜರಾಥಿ ಶಾಲೆಯ ಕಟ್ಟಡದ ಅನಾವರಣ ಸಮಾರಂಭ ೨೩ಕ್ಕೆ ಜರಗುವದಿದ್ದು ಅದಕ್ಕಾಗಿ ಮುಖ್ಯ ಮಂತ್ರಿ ಶ್ರೀ ಬಿ. ಜಿ. ಖೇರರು ಬರಲಿದ್ದಾರೆಂದು ತಿಳಿಯುತ್ತದೆ. ಈ ಕಟ್ಟಡದ ಶಂಕು ಸ್ಥಾಪನೆಯೂ ೯ ತಿಂಗಳ ಹಿಂದೆ ಮಹಾತ್ಮ ಪೇರರ ಆ ಹಸ್ತದಿಂದ ಆಗಿದ್ದಿತು.

ಬಾಗಲಕೋಟೆಯಲ್ಲಿ ಮಾರೀ ಬೇನೆ ಪ್ರಾರಂಭವಾಗಿ ಒಂದೆರಡು ಮರಣಗಳೂ ಆಗಿವೆ. ಟಾಯಫಾಯಿಡ್‌ದಿಂದ ನರಳುವವರ ಸಂಖ್ಯೆಯೂ ಹೆಚ್ಚುತಲಿದೆ. ಬಿಸಿಲಿನ ತಾಪ ಹೆಚ್ಚುತಲಿದೆ ಬೆಲ್ಲವನ್ನು ಇನ್ನೂ ಸೀದಾ ಅಂಗಡಿಗಳಲ್ಲಿ ಕೊಡಹತ್ತಿಲ್ಲಾದ್ದರಿಂದ ತೊಂದರೆಯಾಗಹತ್ತಿದೆ.

---

ಮೈಸೂರು ದಿವಾಣ ಸರ್ ರಾಮಸ್ವಾಮಿ ಮುದ್ಲಿಯಾರರು ಮೈಸೂರಿಗೆ ವಿದೇಶದಿಂದ ಮರಳುವಾಗ ದಾವಣಗೆರೆ ಸ್ಟೇಶನದಲ್ಲಿ ಕರ್ನಾಟಕ ಸಂಘದವರು ವಯಸ್ಕರ ವಿದ್ಯಾಭ್ಯಾಸ ಹಳ್ಳಿಯ ಪುನರುಜ್ಜೀವನ ಮುಂತಾದ ವಿಷಯಗಳ ಮೇಲೆ ಚರ್ಚೆಮಾಡಿ ಸರಕಾರದವರು ಸಹಾಯಗಳನ್ನು ಕೋರಿದರು. [illegible]

### [illegible]

[illegible]

ಶ್ರೀಮತಿ ಶಾಂತಾ ಮುಕರ್ಜಿ [illegible] ಎಂ. ದಾಲಬಿಂಗ ಮಾಸ್ತರ [illegible] ಟಿಕರು ಮತ್ತು ಅಧ್ಯಕ್ಷರು ಇದೇ ಹಿಲ್ಲೆ [illegible] ಎಲ್ಲಿಯೂ ಮಾತಾಡ ಬಾರದೆಂದು ವಿಧಿಸಿ [illegible] ಬಂಧಿತರಾದವರನ್ನು ಜಾಮೀನ ಮೇಲೆ [illegible] ಗಡೆ ಮಾಡಿದ್ದು ೨೨ಕ್ಕೆ ಟಪ್ಪೆ ಪಡೆ [illegible]

ಕೊಂಪಾದಲ್ಲಿ ರಾಷ್ಟ್ರೀಯ ಸಪ್ತಾಹ [illegible] ಹೆಯಿಂದ ಜರುಗಿಸಲ್ಪಟ್ಟಿತು. ತಾ. [illegible] ತಾರೀಕು ಪ್ರಭಾತ [illegible] ಮುಂತಾದ್ದರ ಬಗ್ಗೆ ಭಾಷಣಗಳಾದವು.

### ಬಳ್ಳಾರಿ

ಹರಪನಹಳ್ಳಿಯಲ್ಲಿ ಜರಗಲಿರುವ [illegible] ಕನ್ನಡ ಸಾಹಿತ್ಯ ಸಮ್ಮೇಲನದಲ್ಲಿ [illegible] ಪ್ರದರ್ಶನಕ್ಕೆ ಖಾದಿ, ಚರಖಾ, [illegible] ಚಿತ್ರ, ಪುಸ್ತಕ, ಕೈಗಾರಿಕೆ ಸಾಮಾನ [illegible] ಇನ್ನಿತರ ವಸ್ತುಗಳನ್ನು ಕಳಿಸಿ [illegible] ಭಾಗವಹಿಸಿಕೊಳ್ಳಬಯಸುವವರು [illegible] ದೊಳಗಾಗಿ ಪ್ರದರ್ಶನ ಸಮಿತಿಗೆ [illegible] ಬೇಕೆಂದು ಪ್ರಕಟಿಸಲಾಗಿದೆ.

ಕನ್ನಡ ಸಾಹಿತ್ಯ ಸಮ್ಮೇಲನದ [illegible] ವಿಜ್ಞಾನ ಗೋಷ್ಠಿಯನ್ನೂ ಹರಪನಹಳ್ಳಿ [illegible] ಕೂಡಿಸುವದು ಗೊತ್ತಾಗಿದೆ. ಅದಕ್ಕೆ [illegible] ತುಮ್ಮಿನಕಟ್ಟಿಯವರು ಅಧ್ಯಕ್ಷರಾಗ [illegible] ದ್ದಾರೆ. ಜ. ಸಿ. ಹಿರೇಮಠರು ಸ್ವಾಗತಾಧ್ಯಕ್ಷರಾಗಿರುವರು.

ಮಹಿಳಾಗೋಷ್ಠಿಗೆ ಶ್ರೀಮತಿ ಟಿ. ಎಚ್ [illegible] ಸರ್ವಮಂಗಳಮ್ಮನವರು ಅಧ್ಯಕ್ಷರಾಗು [illegible] ವರು. ಶ್ರೀಮತಿ ಪಾರ್ವತಿಬಾಯಿ [illegible] ವರು ಸ್ವಾಗತಾಧ್ಯಕ್ಷರು ಎಚ್ ಎಂ [illegible] ಯ್ಯನವರು ಸ್ವಯಂಸೇವಕ ದಲದ [illegible] ರಾಗಿರುವರು.

ಪುರೋಗಾಮಿ ಪಕ್ಷದ ಪ್ರಮುಖರಾದ [illegible] ಭದ್ರ ಯಾಜಿಯವರು ಬಳ್ಳಾರಿಯ [illegible] ಮೂರ್ತಿ ಮೈದಾನದಲ್ಲಿ ಕೂಡಿದ [illegible] ಭಾಷಣ ಮಾಡುತ್ತ ಸದ್ಯದ ರಾಜಕೀಯ [illegible] ತಿಯನ್ನು ವಿವರಿಸಿದರು.

### ಕನ್ನಡ ಸಂಸ್ಥಾನ

ನಳದುರ್ಗ ಪಟ್ಟಣವು ಪ್ರಕ್ಷುಬ್ಧ [illegible] ವೆಂದು ನಿಜಾಂ ಸರಕಾರದವರು [illegible] ಹೊರಡಿಸಿದ್ದಾರೆ. ಈ ಪಟ್ಟಣದಲ್ಲಿ ಒಂದು [illegible] ಹಿಂದೆ ಜಾತೀಯ ಗಲಭೆಯೆದ್ದಿತು [illegible] ಉದ್ವೇಗದ ವಾತಾವರಣವಿದೆ. ಒಂದು [illegible] ವರೆಗೆ ಪಟ್ಟಣದಲ್ಲಿಯ ಪೋಲೀಸ [illegible] ಹೆಚ್ಚಿಸಲಾಗುವದು.

೧೯೪೮ ರಲ್ಲಿ ಕೊಲ್ಹಾಪುರದಲ್ಲಿ ಬ್ರಿಟಿಶ [illegible] ಪಡೆಯೊಂದನ್ನಿಡುವದನ್ನೂ [illegible] ಆದರೆ ಪೂರ್ವ ಸಿದ್ಧತೆ ನಡೆದಿದೆ. [illegible] ರದ ಹಳೆ ವಿಮಾನಗೃಹ [illegible] ದಿದೆ. ಈ ಸೈನ್ಯ ಪಡೆಯನ್ನಿಡಲು ಛತ್ರಪತಿ [illegible] ಮತಿ ಸಿಕ್ಕಿದೆಂದೂ ತಿಳಿಯುತ್ತದೆ.

ಸಂಪೂರ್ಣ ಹೊಣೆಗಾರ ಸರ [illegible] ಸಮೀಪಕ್ಕೆ ಬರುವ ರಾಜಕೀಯ [illegible] ಳನ್ನು ಮಿರಜ (ಹಿರಿಯ) [illegible] ಎಪ್ರಿಲ ೨೦ ಕ್ಕೆ ಜಾಹೀರ [illegible]

ಹಿರಿಮಿರಜೆಯ ದಿವಾಣರಾದ ರಾ. [illegible] ವಿ. ವೈದ್ಯರನ್ನು ಅರ್. ವಿ. [illegible] ದಲ್ಲಿ ಶಾಸನಸಭೆಯ ಸರಕಾರಿ [illegible] ರಾಜೇಸಾಹೇಬರು ನೇಮಿಸಿದ್ದಾರೆ. [illegible] ಕರರ ಆರ್ಥಿಕ ಸಹಾಯ [illegible]

ದೊಡ್ಡೂರಲ್ಲಿ ಒಂದು [illegible] ಯಿಂದ ಮೃತರಾಗಿದ್ದಾರೆ. [illegible]

[illegible] ಗಳು [illegible]

# ಹಿಂದುಸ್ಥಾನ

### ಮುಂಬಯಿ

ಹಿಂದುಸ್ಥಾನವು ತನ್ನ ಸಮುದ್ರವಾಣಿಜ್ಯ ವ್ಯಾಪಾರದ ಅಭಿವೃದ್ಧಿ ಪಡಿಸಿಕೊಳ್ಳುವಂತೆ ಸರಕಾರ ಸರ್ವ ರೀತಿಯಿಂದ ಪ್ರಯತ್ನಿಸುವದೆಂದು ನಡುಗಾಲ ಸರಕಾರದ ವಾಣಿಜ್ಯ ಮಂತ್ರಿಗಳಾದ ಚುಂದ್ರಿಗಾರರು ಹಿಂದುಸ್ಥಾನದ ನೌಕಾ ಕಂಪನಿಗಳ ಪ್ರತಿನಿಧಿಗಳ ಸಭೆಯಲ್ಲಿ ಮಾತಾಡುತ್ತ ಹೇಳಿದರು. ಹಿಂದುಸ್ಥಾನಕ್ಕೆ ಪ್ರಚಂಡ ಕರಾವಳಿ ಪ್ರದೇಶವಿದ್ದು ಅದರ ಭೌಗೋಲಿಕ ಪರಿಸ್ಥಿತಿಯೂ ಅನುಕೂಲವಿರುವದರಿಂದ ಸಮುದ್ರದಾಣಿಯ ವ್ಯಾಪಾರಾಭಿವೃದ್ಧಿಗೆ ಎಲ್ಲ ಬಗೆಯ ಅನುಕೂಲತೆಗಳಿವೆಯೆಂದೂ ಅವರು ಸಾರಿದರು.

ಮುಂಬಯಿ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಕಾರ್ಯಕಾರಿ ಮಂಡಳದ ಸದಸ್ಯರೂ ಸಾಮ್ಯವಾದಿಗಳೂ ಆಗಿರುವ ಅಶೋಕ ಮೇಹತಾರವರು ಬೆಸ್ಟ ಕಂಪನಿಯ ಕೂಲಿಕಾರರ ಸಂಪಿನಲ್ಲಿ ಪ್ರತ್ಯಕ್ಷ ಭಾಗವಹಿಸಿ ಪ್ರಾಂತಿಕ ಕಮಿಟಿಯು ವಿಧಿಸಿದ ಆಜ್ಞೆಯನ್ನು ಮುರಿಯುತಿರುವ ಬಗ್ಗೆ ಕಾರ್ಯದರ್ಶಿಗಳು ಆರೋಪಿಸಿ ಪತ್ರ ಬರೆದಿರುವರು.

ವರ್‍ಹಾಡವನ್ನು ವಶಪಡಿಸಿಕೊಳ್ಳಬೇಕೆಂಬ ನಿಜಾಮರ ಪ್ರಯತ್ನವನ್ನು ಮಹಾರಾಷ್ಟ್ರವಷ್ಟೇ ಅಲ್ಲ ಆದರೆ ಇಡೀ ಭರತಖಂಡ ವಿರೋಧಿಸುವದೆಂದು ಕಾಂಗ್ರೆಸ ಕಾರ್ಯಕಾರೀ ಮಂಡಳದ ಸದಸ್ಯರಾದ ಶಂಕರರಾವದೇವ ಇವರು ಮಹಾರಾಷ್ಟ್ರ ಏಕೀಕರಣ ಪರಿಷತ್ತಿನ ಅಧ್ಯಕ್ಷಸ್ಥಾನದಿಂದ ಬೆಳಗಾವಯಲ್ಲಿಯ ಸಭೆಯಲ್ಲಿ ಹೇಳಿದರು. ಬ್ರಿಟಿಶರ ಸಾರ್ವಭೌಮತ್ವ ನಷ್ಟವಾದ ಬಳಿಕ ವರ್‍ಹಾಡದ ನಾಲ್ಕು ಜಿಲ್ಹೆಗಳು ನಿಜಾಂ ಪ್ರಭುಗಳಿಗೆ ಬರತಕ್ಕವು ಎಂಬುವಾಗಿ ನಿಜಾಮರ ದಿವಾಣರಾದ ಸರ್ ಮಿರ್ಜಾ ಇಸ್ಮಾಯಿಲ್‌ರು ಇತ್ತೀಚೆ ಪಟ್ಟ ಅಭಿಪ್ರಾಯಕ್ಕೆ ಉತ್ತರರೂಪವಾಗಿ ಶಂಕರರಾಯರು ಹೀಗೆ ಹೇಳಿದರು. ಹೈದ್ರಾಬಾದಿನವರು ಮಹ್ಯಲೀಶಟ್ಟಣವನ್ನೂ ಬೇಡುತಿರುವರು.

ಇತ್ತೀಚಿನ ಗಲಭೆಗಳ ಸಂಬಂಧದಲ್ಲಿ ಪೋಲೀಸ ಕಮೀಶನರರು ನಾಲ್ಕು ಭಾಗಗಳ ನಿವಾಸಿಗಳ ಮೇಲೆ ೪೪೫೦ ರೂ. ಸಾಮೂಹಿಕ ದಂಡ ಹೇರಿದ್ದಾರೆ.

ಠಾಣಾ ಜಿಲ್ಹೆಯಲ್ಲಿ ಗಂಡಾಂತರ ಪರಿಸ್ಥಿತಿ ಸಾರಿದ್ದರ ಅವಧಿಯನ್ನು ೧೨ ನೇ ತಾರೀಕಿನಿಂದ ಮತ್ತೆ ಒಂದು ವರುಷ ಬೆಳಿಸಿದ್ದಾರೆ.

### ಮದ್ರಾಸ

ಮದ್ರಾಸ ಪ್ರಾಂತದ ಶಿಷ್ಟಮಂಡಳವೊಂದು ಸೇವಾಗ್ರಾಮದಲ್ಲಿಯ ಮಹಾತ್ಮರನ್ನು ಕಂಡು ಹರಿಜನ ಕಾಯದೆಯಿಂದ ಮಂದಿರ ಪ್ರವೇಶ ದೊರಕಿಸಿ ಕೊಡುವದು ಅಹಿಂಸಾ ತತ್ವಕ್ಕೆ ವಿರುದ್ಧವಾಗಿದೆಂದು ಅವರಿಗೆ ತಿಳಿಸಲಿದೆಂದು ತಿಳಿಯುತ್ತದೆ. ಘಟನಾ ಸಮಿತಿಗೂ ಕಾಂಗ್ರೆಸ ವರಿಷ್ಠರಿಗೂ ಈ ತಮ್ಮ ಅಭಿಪ್ರಾಯವನ್ನು ಶಿಷ್ಟಮಂಡಳದವರು ನಿವೇದಿಸಲಿರುವರು.

### ಬಿಹಾರ

ಪಾಟಣಾದಲ್ಲಿ ಪೋಲೀಸ ಸಂಪಿನಲ್ಲಿ ಪ್ರಾಮುಖ್ಯವಾಗಿ ಭಾಗವಹಿಸಿದ ೪೦೦ ಕ್ಕಿಂತ ಹೆಚ್ಚು ಪೋಲೀಸ ಬಂಡುಗಾರರನ್ನು ಸೆರೆಹಿಡಿಯಲಾಗಿದೆ. ಇವರಲ್ಲಿ ಏವರಿಗೆ ಪೋಲೀಸ ಕಾಯದೆಯ ೨೯ ನೇ ಕಲ್ಮಿನನ್ವಯ ಶಿಕ್ಷೆ ವಿಧಿಸಲಾಯಿತು. ಉಳಿದ ಖಟ್ಲೆಗಳು ವಿಚಾರಣೆ ಆಗಲಿದೆ.

### ಸರಹದ್ದು

ಪೇಶಾವರದಲ್ಲಿ ೧೩ ನೇ ತಾರೀಖು ಗ್ರ್ಯಾಂಡ ಟ್ರಂಕ ರಸ್ತೆಯಲ್ಲಿ ಮತ್ತೆ ಒಬ್ಬ ಸತ್ತು ಬಿದ್ದದ್ದು ಕಂಡು ಬಂತು. ಗುಂಡಿನಿಂದ ಯಾರೋ ಅವರನ್ನು ಕೊಂದದ್ದು ಗೊತ್ತಾಯಿತು. ಮುಂಜಾನೆ ಅದೇ ಭಾಗದಲ್ಲಿ ಒಬ್ಬನನ್ನು ಕೊಂದದ್ದು ಗೊತ್ತಾಯಿತು. ಪಂಜಾಬಿನಿಂದ ಮುಸ್ಲಿಂ ನ್ಯಾಶನಲ್ ಗಾರ್ಡದ ಎರಡು ತಂಡಗಳು ಬಂದದ್ದು ತಿಳಿಯುತ್ತದೆ.

ಕೆಲ ಮುಸ್ಲಿಂ ಲೀಗ ಸ್ವಯಂ ಸೇವಕರು ಸ್ವಾಕೀರಾ ರೇಲ್ವೆ ಸ್ಟೇಶನ್ ತಿಕೀಟ ಕಚೇರಿಯಲ್ಲಿ ಹೊಕ್ಕು ಪಾಕಿಸ್ತಾನ ತಿಕೀಟಗಳನ್ನು ಕೊಡ ಹೊಡಗಿರುವರೆಂದು ತಿಳಿಯುತ್ತದೆ. ಗಡಿನಾಡಿನಲ್ಲಿ ಮುಸ್ಲಿಂ ಲೀಗಿನ ಆಂದೋಲನ ಪ್ರಾರಂಭವಾಗಿ ಎಂಟು ವಾರಗಳಾಗಿರುವವು.

### ದಿಲ್ಲಿ

ದಿಲ್ಲಿ ಕ್ಯಾಂಟೋನಮೆಂಟಿನ ಮದ್ದಿನ ಕಾರಖಾನೆಯ ೩೦೦೦ ಕೆಲಸಗಾರರಲ್ಲಿ ೧೦೦೦ ಕೆಲಸಗಾರರು ತಮ್ಮ ಮಹಾಮಂಡಳದವರ ಆಜ್ಞೆಯ ಪ್ರಕಾರ ಸಂಪು ಹೂಡಿರುವರು. ಆಯು. ಈ. ಎಂ. ಈ ಕಾರಖಾನೆಯ ೮೦೦ ಕೆಲಸಗಾರರೂ ಸಂಪುಹೂಡಿದ್ದಾರೆ. ಹಿಂದುಸ್ಥಾನದಲ್ಲಿ ಒಟ್ಟು ೩೬ ಮದ್ದಿನ ಕಾರಖಾನೆಗಳಿದ್ದು ಸಂಪು ಎಲ್ಲೆಡೆ ಹಬ್ಬಿದರೆ ೨೫೮೦೦೦ ಕೆಲಸಗಾರರು ಸಂಪಿನಲ್ಲಿ ಸೇರಬಹುದು.

ವಾಯಿಸರಾಯರು ಜಿನ್ನಾರವರೊಡನೆ ನಡೆಸಿದ ಸಂಭಾಷಣೆಯ ಅಧಿಕೃತಸಾರವೆಂದು ಲಂಡನದ ಸುದ್ದೀ ಸಂಸ್ಥೆಯಿಂದ ೧೩ ನೇ ತಾರೀಕಿಗೆ ಪ್ರಕಟಿಸಲ್ಪಟ್ಟ ಸುದ್ದಿ ನಿರಾಧಾರವಾಗಿದೆಂದು ವಾಯಿಸರಾಯ ಭವನದಿಂದ ಪ್ರಕಟನೆ ಹೊರಟಿದೆ.

ನಡುಗಾಲ ಸರಕಾರದ ಶಿಕ್ಷಣ ಮಂತ್ರಿಗಳಾದ ಮೌಲಾನಾ ಅಬುಲ್‌ಕಲಂ ಅಝಾದರು ಮೇ ೨೩—೨೪ಕ್ಕೆ ಸಿಮಲಾದಲ್ಲಿ ಶಿಕ್ಷಣ ಪರಿಷತ್ತೊಂದನ್ನು ಕರೆದಿರುವರು. ಪ್ರಾಂತಿಕ ಮಂತ್ರಿಗಳು ವಿಶ್ವವಿದ್ಯಾಲಯಗಳ ಉಪಕುಲಪತಿಗಳು ಮತ್ತು ಉಳಿದ ಹದಿನೆಂಟು ಜನ ಶಿಕ್ಷಣ ತಜ್ಞರನ್ನು ಈ ಪರಿಷತ್ತಿಗೆ ಆ ಮಂತ್ರಿಸಲಾಗಿದೆಂದು ತಿಳಿಯುತ್ತದೆ. ಶಿಕ್ಷಣದಲ್ಲಿ ಸಂಪೂರ್ಣ ಕ್ರಾಂತಿಯನ್ನುಂಟು ಮಾಡುವಂಥ ಏಳು ಮುದ್ದೆಗಳು ಕಾರ್ಯಕ್ರಮ ಪಟ್ಟಿಯೊಂದನ್ನು ಅಝಾದ ಸಾಹೇಬರು ವಿಚಾರಣೆಗಾಗಿ ಸಿದ್ಧ ಪಡಿಸಿರುವರು.

೧೯೪೬—೪೭ ಹಿಂದುಸ್ಥಾನದಲ್ಲಿ ೧೩೬೩೨೦೦೦ ಎಕರೆ ಭೂಮಿಯಲ್ಲಿ ಹತ್ತಿಯ ಉತ್ಪಾದನೆ ೩೩೮೮೦೦೦ ಗಂಟಿನಷ್ಟಿದೆಂದು ಹಿಂದುಸ್ಥಾನ ಸರಕಾರದ ವಾಣಿಜ್ಯ ಶಾಖೆಯವರು ಪ್ರಕಟಿಸಿದ್ದಾರೆ.

ಸ್ತ್ರೀಯರು ಸುಸಂಘಟಿತರಾಗಿ ಸಮಾಜದ್ರೋಹಿಗಳನ್ನು ಪ್ರತಿಭಟಿಸಬೇಕೆಂದು ಶ್ರೀಮತಿ ಸುಚೇತಾ ಕೃಪಲಾನಿಯವರು ದಿಲ್ಲಿ ದಿವಾಣ ಸಭಾ ಭವನದಲ್ಲಿ ನೆರೆದ ಸ್ತ್ರೀಯರ ಸಭೆಯಲ್ಲಿ ಭಾಷಣ ಮಾಡುತ್ತ ಹೇಳಿದರು. ನವಖಾಲಿಯಲ್ಲಿ ಸ್ತ್ರೀಯರಿಗಾದ ಅವಮಾನ ಸ್ತ್ರೀ ಜಾತಿಯ ಅಪಮಾನವೆಂದು ಭಾವಿಸುತ್ತೇನೆ. ಸುಸಂಸ್ಕೃತವೆನಿಸಿಕೊಳ್ಳುವ ಸಮಾಜಕ್ಕೆ ಅದೊಂದು ಆಹ್ವಾನವೆಂದೂ ಅವರು ಹೇಳಿದರು. ಹಿಂದೂ ಸ್ತ್ರೀಯರು ಸ್ವಸಂರಕ್ಷಣೆಗಾಗಿ ಸಿದ್ಧರಾಗಬೇಕೆಂದು ಶ್ರೀಮತಿ ಅರುಣಾ ಅಸಫ ಅಲ್ಲಿಯವರು ಹೇಳಿದರು.

ಹಳೆ ದಿಲ್ಲಿಯ ಕಾಶ್ಮೀರ ಅಗಸೆಯ ಹತ್ತರ ಮದನ ಮೋಹನಲಾಲ ಟ್ರಸ್ಟಿನ ಪರವಾಗಿ ಆಯುರ್ವೇದ ಸಂಶೋಧನ ಸಂಸ್ಥೆಯೊಂದು ಸ್ಥಾಪಿತವಾಗಲಿದೆ.. ಒಂದು ಆಸ್ಪತ್ರೆಯನ್ನು ಅಲ್ಲಿ ತೆರೆಯಲಾಗುವದು. ಟ್ರಸ್ಟಿನ ಅಧ್ಯಕ್ಷರಾದ ಶ್ರೀ ರಾಮಚರಣರು ೬ ಕೋಟಿ ರೂಪಾಯಿ ನಿಧಿಯನ್ನು ಹೆಚ್ಚಿಸಲಿರುವರು.

ಹಿಂದುಸ್ಥಾನದಲ್ಲಿಯ ಉದ್ಯೋಗಾಭಿವೃದ್ಧಿಗಾಗಿ ಮುಂದಿನ ಮೂರು ವರ್ಷ ಪ್ರತಿ ವರುಷ ೩೦೦ ರಿಂದ ೫೦೦ ಕೋಟಿ ರೂಪಾಯಿಗಳ ಬಂಡವಲು ಹಾಕಬೇಕೆಂದು ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಅ. ಭಾ. ಕಾರಖಾನೆದಾರ ಸಂಘದ ವಾರ್ಷಿಕ ಅಧಿವೇಶನದಲ್ಲಿ ಅಭಿಪ್ರಾಯ ಪಟ್ಟರು. ೧) ಯಂತ್ರ ಯಂತ್ರೋಪಕರಣಗಳನ್ನು ಸಿದ್ಧಪಡಿಸಲು ದೊಡ್ಡ ಕಾರಖಾನೆ ಹೊರಡಿಸುವದು. ೨) ತಾಂತ್ರಿಕ ಶಿಕ್ಷಣ ಸಂಸ್ಥೆಯನ್ನು ಹೊರಡಿಸುವದು. ೩) ಎಂಜಿನಿಯರರು, ರಸಾಯನಜ್ಞರು ಮತ್ತು ಉಳಿದ ತಜ್ಞರರ ಸಲಹೆ ಸಮಿತಿಗಳನ್ನು ಸಂಸ್ಥಾಪಿಸುವದು ಮತ್ತು ೪) ಬರುವ ವರುಷ ಎಂಜಿನಿಯರಿಂಗ ಪತ್ರಿಕೆಗಳನ್ನು ಹೊರಡಿಸುವಲ್ಲಿ ಸರಕಾರದ ಸಹಾಯ ಸಹಕಾರ ಅತ್ಯವಶ್ಯವೆಂದೂ ಅವರು ಅಭಿಪ್ರಾಯ ಪಟ್ಟರು.

---

ಅಮೃತಸರದಲ್ಲಿ ೧೩ಕ್ಕೆ ಜಾರಿ ಮಾಡಲ್ಪಟ್ಟಿದ್ದ ೩೩ ಗಂಟೆಗಳ ಕರ್ಫ್ಯು ಮರು ದಿನ ೯ ಕ್ಕೆ ಮುಗಿಯಿತು. ಒಂದು ವಾಹನಕ್ಕೆ ಬೆಂಕಿ ಹಚ್ಚಲ್ಪಟ್ಟದ್ದು ಕಂಡುಬಂತು. ಮತ್ತೆ ಎರಡು ಹೆಣಗಳೂ ಒಂದು ರುಂಡವೂ ಸಿಕ್ಕಿದ್ದು ಆಸ್ಪತ್ರೆಯಲ್ಲಿ ಸತ್ತವರನ್ನೂ ಕಗೊಂಡು ಮರಣ ಸಂಖ್ಯೆ ೨೫ ಕ್ಕೇರಿರುವದು.

## ಹಿಂದುಸ್ತಾನಕ್ಕೆ ನಿಕೆಲ ರೂಪಾಯಿಗಳು

### ಕೇಂದ್ರ ಶಾಸನ ಸಭೆಯಲ್ಲಿ ಮಸೂದೆಯು ಸ್ವೀಕಾರ

### ಜಲ ವಿದ್ಯುತ್ ಯೋಜನೆಗಳಿಗೆ ಕೇಂದ್ರದ ಸಹಾಯ

#### ಹಿಂದೀ ಹಡಗ ನಿಯಂತ್ರಣ

ತಾ. ೯ ಕ್ಕೆ ಕೇಂದ್ರಶಾಸನಸಭೆಯಲ್ಲಿ ವಾಣಿಜ್ಯ ಮಂತ್ರಿ ಶ್ರೀ ಚುಂದ್ರಿಗಾರರು ಹಿಂದೀ ಹಡಗುಗಳ ನಿಯಂತ್ರಣಕ್ಕೆ ಸಂಬಂಧಿಸಿದ ಮಸೂದೆಯೊಂದನ್ನು ಮಂಡಿಸಿ ಪಾಸು ಮಾಡಿಕೊಂಡರು. ದೀರ್ಘ ಕರಾವಳಿಯುಳ್ಳ ಹಿಂದುಸ್ಥಾನಕ್ಕೆ ಬಲಿಷ್ಠ ಹಡಗುಪಡೆ ಬೇಕಾಗಿದೆ. ಹಿಂದೀ ಹಡಗು ಕಂಪನಿಗಳು ಈಗಾಗಲೆ ೧೧ ಹಡಗುಗಳನ್ನು ಅಮೇರಿಕೆಯಿಂದ ಕೊಂಡಿವೆ. ವ್ಯಾಪಾರಿಗಳು ಇನ್ನೂ ಹಡಗ ಕೊಳ್ಳಬೇಕೆಂದಿದ್ದರೆ ಅವನ್ನು ತೆಗೆಸಿಕೊಡಲು ಸರಕಾರ ಪ್ರಯತ್ನಿಸುವದು. ಕರಾವಳಿ ವ್ಯಾಪಾರವಲ್ಲದೆ ಸಾಗರೋತ್ತರ ವ್ಯಾಪಾರವಲ್ಲಿಯೂ ಕೈಯಿಕ್ಕುವ ವಿಷಯದಲ್ಲಿ ಬ್ರಿಟಿಶ ಸರಕಾರದೊಡನೆ ಮಾತುಕತೆ ನಡೆದಿದ್ದು ಕಂಪನಿಗಳು ವೈಯಕ್ತಿಕವಾಗಿ ಮಾತುಕತೆ ನಡೆಸಬಹುದೆಂದು ಬ್ರಿಟಿಶ ಸರಕಾರ ಸೂಚಿಸಿದೆಯೆಂದು ವಾಣಿಜ್ಯ ಮಂತ್ರಿಗಳು ತಿಳಿಸಿದರು.

೧೯೩೯ ರ ಮೋಟಾರ ವಾಹನ ಕಾಯದೆ ತಿದ್ದುಪಡಿ ಮಸೂದೆಯೂ ಪಾಸಾಯ್ತು.

#### ನಿಕ್ಕಲ ರೂಪಾಯಿ

ಹಣ ಕಾಸಿನ ಮಂತ್ರಿ ಶ್ರೀ ಲಿಯಾಕತ ಅಲ್ಲಿಖಾನರು ಮಂಡಿಸಿದ ನಿಕ್ಕಲರೂಪಾಯಿ ಮಸೂದೆ ಈ ಅಧಿವೇಶನದಲ್ಲಿ ಬಂದ ಅತಿ ವಿವಾದಾಸ್ಪದ ಮಸೂದೆಗಳಲ್ಲೊಂದೆಂದು ಹೇಳಬಹುದು. ಬೆಳ್ಳಿ ರೂಪಾಯಿಯನ್ನು ಹಿಂತೆಗೆದು ಅದರ ಸ್ಥಾನದಲ್ಲಿ ನಿಕ್ಕಲ ರೂಪಾಯಿಗಳನ್ನು ಚಲಾವಣೆಗೆ ತರಲು ಈ ಮಸೂದೆ ಅಧಿಕಾರ ಕೊಡುವದಲ್ಲದೆ ಬೆಳ್ಳಿಯ ಸಟ್ಟಾ ವ್ಯಾಪಾರವನ್ನೂ ಹತ್ತಿಕ್ಕುವದು. ಪುರಾತನ ಕಾಲದಿಂದ ಬೆಳ್ಳಿಯ ರೂಪಾಯಿ ಬಳಕೆಯಲ್ಲಿದ್ದರೂ ಇನ್ನು ಬೆಳ್ಳಿಯಂಥ ಅಮೂಲ್ಯ ಲೋಹವನ್ನು ನಾಣ್ಯಕ್ಕೆ ಉಪಯೋಗಿಸುವದು ಅನವಶ್ಯವೆಂದು ಹಣ ಕಾಸಿನ ಮಂತ್ರಿಗಳು ಹೇಳಿದರು. ಯುದ್ಧಕಾಲದಲ್ಲಿ ಬೆಳ್ಳಿಯ ನಾಣ್ಯದ ಬೇಡಿಕೆ ಹೆಚ್ಚಿದಾಗ ಅಮೇರಿಕೆಯಿಂದ ಬೆಳ್ಳಿಯನ್ನು ಎರವಲುತಂದು ನಾಣ್ಯ ಹೊರಡಿಸಿದ್ದಾಯಿತು. ಯುದ್ಧಮುಗಿಯಿತೆಂದು ಅಮೇರಿಕೆ ಅಧಿಕೃತವಾಗಿ ಸಾರಿದ ೫ ವರ್ಷಗಳಲ್ಲಿ ಅದನ್ನು ತಿರುಗಿ ಕೊಡಬೇಕಾಗುವದರಿಂದ ಅದಕ್ಕೆ ನಾವು ಸಿದ್ಧವಾಗಿರಬೇಕೆಂದು ಅವರು ವಾದಿಸಿದರು. ತಾ ೧೦ ಕ್ಕೆ ಅದು ಪಾಸಾಗುವ ಮೊದಲು ಆ ಮಸೂದೆಯಮೇಲೆ ಅನೇಕ ಸದಸ್ಯರು ತೀಕ್ಷ್ಣ ಟೀಕೆಗಳನ್ನು ಮಾಡಿದರು. ಶ್ರೀ ಮನುಸುಬೇದಾರರು ಅದನ್ನು ಖಂಡಿಸುತ್ತ ಅದು ಅನವಶ್ಯಕ, ಖೊಟ್ಟಿ ನಾಣ್ಯಗಳಿಗೆ ಪ್ರೋತ್ಸಾಹ ಕೊಡುವದು, ಹಳ್ಳಿಗರಿಗೆ ಅದರಲ್ಲಿ ವಿಶ್ವಾಸ ಹುಟ್ಟಲಾರದು, ಮೇಲಾಗಿ ಅದಕ್ಕಾಗಿ ೧೩೦೦೦ ಟನ್ ನಿಕ್ಕಲ್ ಲೋಹವನ್ನು ಅನವಶ್ಯಕವಾಗಿ ಕೊಳ್ಳಬೇಕಾಗುವದು, ಇದರಿಂದ ಬೆಳ್ಳಿಯ ಬೆಲೆಯೂ ಇಳಿಯಲಾರದೆಂದು ಎಚ್ಚರಿಕೆ ಕೊಟ್ಟರು. ಅನಂತಶಯನ ಅಯ್ಯಂಗಾರರೂ ಅದನ್ನು ಟೀಕಿಸಿದರು. ವನಸ್ಪತಿ ತುಪ್ಪದಂತೆ ನಿಕ್ಕಲ್ ರೂಪಾಯಿಯೂ ಸಾಂಕೇತಿಕ ನಾಣ್ಯವಾಗುವದೆಂದರವರು. ಶ್ರೀ ರಾಮನಾರಾಯಣಸಿಂಗರು ಹಣಕಾಸಿನ ಮಂತ್ರಿಗಳ ಉಪಕ್ರಮವನ್ನು ಹುಚ್ಚ ತೊಗಲಖನ ಚರ್ಮದ ನಾಣ್ಯದ ಹಂಚಿಕೆಗೆ ಹೋಲಿಸಿದರು. ಶ್ರೀ ಗಾಡಗೀಳರು ಮಸೂದೆಗೆ ಬೆಂಬಲವಿತ್ತರು. ಕೊನೆಗೆ ಮಸೂದೆ ಪಾಸಾಯಿತು.

---

### ಪಂಜಾಬ

ಹಿಂದು ಮಹಾಸಭೆಯ ಕಾರ್ಯದರ್ಶಿ ವಿ. ಜಿ. ದೇಶಪಾಂಡೆಯವರು ಭೂಕದಯೆಯ ಕಾರ್ಯಕ್ಕಾಗಿ ಪಂಜಾಬಿನಲ್ಲಿ ಸಂಚರಿಸುವವರಿದ್ದರು ಅವರನ್ನು ನಿರ್ಬಂಧಿಸಿ ಗಡಿಪಾರಾಜ್ಞೆಯನ್ನು ಹೊರಡಿಸಿದ್ದು ನ್ಯಾಯ ಸಮ್ಮತವೊ ಎಂದು ಮುಂತಾಗಿ ಲಾಹೋರ ಜೇಲಿನಲ್ಲಿ ಸೇರಿದ್ದ ನ್ಯಾಯಾಲಯದಲ್ಲಿ ವಿಚಾರಣೆ ನಡೆದಿದೆ. ಈಗ ದೇಶಪಾಂಡೆಯವರು ಜಾಮೀನಿನ ಮೇಲೆ ಬಿಡುಗಡೆ ಹೊಂದಿರುವರು.

ಪಂಜಾಬಿನಲ್ಲಿಯ ಪರಿಸ್ಥಿತಿ ಇನ್ನೂ ಸುಧಾರಿಸಿಲ್ಲ. ದೊಂಬಿಗಳ ಸಂಬಂಧದಲ್ಲಿಯ ಅನಧಿಕೃತ ವರದಿಗಳು ಮತ್ತು ಭಾವಚಿತ್ರಗಳ ಮೇಲಿನ ಪೂರ್ವಪರಿಶೀಲನೆಯ ಹುಕುಮಿನ ಅವಧಿಯನ್ನು ಗವರ್ನರರು ಮತ್ತೆ ಹದಿನೈದು ದಿನಗಳ ವರೆಗೆ ಬೆಳೆಸಿದ್ದಾರೆ. ಗುಜರಾನವಾಲಾ ಮೊದಲಾದ ಕಡೆಗೆ ಪ್ರಚಂಡ ಪ್ರಮಾಣದಲ್ಲಿ ಸುಡತಿ ಮೊದಲಾದವುಗಳು ನಡೆದಿವೆ. ರಾವಳಪಿಂಡಿ ನಿರಾಶ್ರಿತರಿಗೆ ಸರಕಾರದವರು ಆಶ್ವಾಸನ ಕೊಟ್ಟಿರುವರು.

ಪಂಡಿತ ಜವಾಹರಲಾಲರು ಪಂಜಾಬಿಗೆ ಹೋದಾಗ ಪಂಜಾಬ ವಿಭಜನೆಯ ಸಂಬಂಧದಲ್ಲಿ ಗವರ್ನರ ಜೆಂಕಿನ್ಸರೊಡನೆ ವಿಚಾರವಿನಿಮಯ ಮಾಡಿದ್ದರಷ್ಟೆ. ಜೆಂಕಿನ್ಸರಿಗೆ ಪಂಡಿತರ ಅಭಿಪ್ರಾಯ ಒಪ್ಪಿಗೆಯಾಗಿದ್ದು ಗವರ್ನರ ಪರಿಷತ್ತಿನಲ್ಲಿ ಅವರು ತಮ್ಮ ಈ ಅಭಿಪ್ರಾಯವನ್ನು ಅರುಹಲಿರುವರಂತೆ. ಸಮ್ಮಿಶ್ರ ಮಂತ್ರಿಮಂಡಳ ಸಾಧ್ಯವಾಗದಿದ್ದರೆ ಪ್ರಾಂತವನ್ನು ವಿಭಾಗಿಸಲೆಬೇಕಾಗುವದೆಂದು ಜೆಂಕಿನ್ಸರು ಹೇಳಲಿರುವರಂತೆ.

### ಸಿಂಧ

ಬಿಹಾರದಲ್ಲಿಯ ಮುಸಲ್ಮಾನ ನಿರಾಶ್ರಿತರನ್ನಲ್ಲದೆ ಮುಂಬಯಿ ಮತ್ತು ಕಾಠೇವಾಡದಲ್ಲಿಯ ಮುಸಲ್ಮಾನ ವ್ಯಾಪಾರಸ್ಥರನ್ನೂ ಸಿಂಧದಲ್ಲಿ ಬರಮಾಡಿಕೊಳ್ಳಲು ಅಲ್ಲಿನ ಮುಸ್ಲಿಂ ಲೀಗಿನವರು ಎಲ್ಲ ಬಗೆಯ ವ್ಯವಸ್ಥೆಯನ್ನು ಮಾಡಿರುವರು. ವಸತಿಗಳ ಸೌಕರ್ಯಗಳನ್ನು ಒದಗಿಸುವಾಗ ಬಿಹಾರ, ಮುಂಬಯಿ ಕಾಠೇವಾಡಗಳಿಂದ ಬರುವ ಮುಸಲ್ಮಾನರಿಗೇ ಪ್ರಥಮ ಪ್ರಾಶಸ್ತ್ಯ ಕೊಡಬೇಕೆಂದು ಬಾಡಿಗೆ ನಿಯಂತ್ರಣಾಧಿಕಾರಿಗೆ ವಿಧಿಸಲಾಗಿದೆಂದೂ ತಿಳಿಯುತ್ತದೆ.

#### ವಿದ್ಯುತ್ ಯೋಜನೆಗಳು

ತಾ. ೧೦ ಕ್ಕೆ ವಿದ್ಯುತ್ ಶಾಖೆಯ ಕಾರ್ಯದರ್ಶಿಗಳು ಕೇಂದ್ರ ಸರಕಾರ ಸಹಾಯ ನೀಡಲಿರುವ ಪ್ರಾಂತಿಕ ಜಲ ವಿದ್ಯುತ್ ಯೋಜನೆಗಳ ವಿವರಗಳನ್ನು ಪೂರೈಸಿದರು. ಹೊಸತಾಗಿ ಪ್ರಾರಂಭವಾಗಲಿರುವ ಯೋಜನೆಗಳು ಇಂತಿವೆ:—

ಬಂಗಾಲದಲ್ಲಿ ಮೂರ ಅಣೆಕಟ್ಟಿನ ಯೋಜನೆ (ಅಂದಾಜು ೫ ಕೋಟಿ ರೂ.); ಮುಂಬಯಿಯಲ್ಲಿ ಗ್ರಿಡ್ ಪದ್ಧತಿಯ ವಿದ್ಯುತ್ ಯೋಜನೆ (೮ ಕೋಟಿ); ಮದ್ರಾಸದಲ್ಲಿ ರಾಮಪಾದಸಾಗರ ಯೋಜನೆ (೮೬ ಕೋಟಿ), ತುಂಗಭದ್ರಾ ಯೋಜನೆ (೮॥ ಕೋಟಿ), ಮತ್ತು ಮುಚಕುಂದ ಜಲವಿದ್ಯುತ್ ಯೋಜನೆ (ಎಂಟು ಕೋಟಿ); ಓಡಿಸಾದಲ್ಲಿ ಜಲವಿದ್ಯುತ್ ಗ್ರಿಡ್ (೧೦ ಕೋಟಿ); ಪಂಜಾಬದಲ್ಲಿ ಜಲ ವಿದ್ಯುತ ಟ್ಯೂಬವೆಲ, ಸಿಯಾಲ ಕೋಟಿ— ಗುರ್ಜನವಾಲಾ—ಲಾಯಲಪುರ—ರಾವಳಪಿಂಡಿ ವಿದ್ಯುತ್ ವಿತರಣ ಯೋಜನೆ (೭ ಕೋಟಿ) ಮತ್ತು ನಂಗಲ ವಿದ್ಯುತ್ ಯೋಜನೆ (೧೯ ಕೋಟಿ); ಯುಕ್ತಪ್ರಾಂತದಲ್ಲಿ ನಾಯರ ವಿದ್ಯುತ್ ಯೋಜನೆ (೨೬ ಕೋಟಿ); ಮತ್ತು ಸಾಂದಾ ಕಾಲುವೆ ವಿದ್ಯುತ್ ಯೋಜನೆ (೬ ರಿಂದ ೯ ಕೋಟಿ). ಇದಲ್ಲದೆ ದಾಮೋದರ, ಮಹಾನದಿ, ಕೋಸಿ ಅಣೆಕಟ್ಟುಗಳ ಯೋಜನೆಗಳ ಬಗ್ಗೆಯೂ ಸರಕಾರ ವಿಚಾರ ನಡೆಸಿದ್ದು ಇವುಗಳಲ್ಲಿ ಮೊದಲಿನೆರಡಕ್ಕೆ ೫೫—೫೫ ಕೋಟಿ ರೂಪಾಯಿಗಳೂ ಮೂರನೆಯದಕ್ಕೆ ೯೦ ಕೋಟಿಯೂ ವೆಚ್ಚ ಬರಬಹುದೆಂದು ಅಂದಾಜು ಮಾಡಲಾಗಿದೆ.

ಹಿಂದುಸ್ಥಾನದಲ್ಲಿ ಬ್ರಿಟಿಶ ಆಡಳಿತೆಯ ಕೈಕೆಳಗಿದ್ದ ಕಂಪನಿಗಳಲ್ಲಿ ಹಿಂದೀ ಪಾಲುಗಾರರಿಗೆ ಆಡಳಿತೆಯಲ್ಲಿ ಕೈಹಾಕಲು ಅಡಚಣೆ ಒದ್ದುತ್ತಿರುವ ಬಗ್ಗೆ ಮನುಸುಬೇದಾರರು ಕೇಳಿದ ಪ್ರಶ್ನೆಗಳಿಗೆ ವಾಣಿಜ್ಯ ಮಂತ್ರಿಗಳು ಈ ವಿಷಯಗಳಲ್ಲಿ ದೂರುಗಳು ಬಂದಿದ್ದು ಅವುಗಳನ್ನು ವಿಚಾರಿಸಲಾಗುವದೆಂದು ತಿಳಿಸಿದರು.

#### ಅಚ್ಚಿನ ರಾಷ್ಟ್ರಗಳ ಒಡಂಬಡಿಕೆ

ತಾ. ೧೧ ಕ್ಕೆ, ಅಚ್ಚಿನ ರಾಷ್ಟ್ರಗಳ (ಇಟಲಿ, ರುಮೇನಿಯಾ, ಬಲ್ಗೇರಿಯಾ, ಹಂಗೆರಿ, ಮತ್ತು ಫಿನ್ಲಂಡ್) ಗೂಡ ಹಿಂದೀ ಪ್ರತಿನಿಧಿ ಸಾಮ್ಯುಯೆಲ ರಂಗನಾಥನರು ಮಾಡಿಕೊಂಡ ಒಪ್ಪಂದಕ್ಕೆ ಮನ್ನಣೆ ಕೊಡಬೇಕೆಂಬ ಗೊತ್ತುವಳಿ ಪಾಸಾಯಿತು. ಈ ಒಪ್ಪಂದಗಳಲ್ಲಿಯೂ ಅದಕ್ಕೆ ಸಂಬಂಧಿಸಿದ ಗಡಿನಿರ್ಣಯಗಳಲ್ಲಿಯೂ ಹಿಂದುಸ್ಥಾನಕ್ಕೆ ಯಾವ ಹಿತ ಸಂಬಂಧವೂ ಇಲ್ಲ. ಇದರಿಂದ ನಾವು ಯಾವುದೊಂದು ಪ್ರಬಲ ರಾಷ್ಟ್ರ ಗುಂಪಿಗೆ ಸೇರಿದಂತಾಗುವದಿಲ್ಲೆಂದು ಪಂ. ಜವಾಹರರು ತಿಳಿಸಿದರು.

ಹಣಕಾಸಿನ ಮಂತ್ರಿಗಳ ಬಂಡವಲು ನಿಯಂತ್ರಣ ಮಸೂದೆಯೂ ಅಂದೇ ಪಾಸಾಯಿತು.

ಹಿಂದೂ ಕಾಯದೆಯ ಕ್ರೋಢೀಕರಣಕ್ಕಾಗಿ ರಾವ ಸಮಿತಿಯವರು ಸಿದ್ಧಗೊಳಿಸಿದ ಕರಡನ್ನು ಶ್ರೀ ಜೋಗೇಂದ್ರನಾಥ ಮಂಡಲರು ಮಂಡಿಸಿದರು. ಅದು ಮುಂಬರುವ ಅಧಿವೇಶನದಲ್ಲಿ ವಿಚಾರಕ್ಕೆ ಬರುವದು.

ತಾ. ೧೨ ಕ್ಕೆ ಕೇಂದ್ರ ಶಾಸನ ಸಭೆ ಅನಿಯಮಿತವಾಗಿ ಮುಂದುವರಿಯಿತು.

# ಕೇಳಕರ ನಿರ್ಣಯದಿಂದ ಬಳ್ಳಾರಿ ಕನ್ನಡಿಗರಿಗೆ ಅನ್ಯಾಯವಾಗಿದೆ

## ಏಕೀಕರಣ ಒಡನೆ ಆಗಬೇಕು

### ಬಳ್ಳಾರಿ ಜಿಲ್ಲಾ ಪ್ರಥಮ ಕ. ಏಕೀಕರಣ ಪರಿಷತ್ತಿನ ಕಾರ್ಯಕಲಾಪಗಳು

ಬಳ್ಳಾರಿ ಜಿಲ್ಲಾ ಆದವಾನಿ ತಾಲೂಕು ಬದನೇಹಾಳು ಗ್ರಾಮದಲ್ಲಿ ಬಳ್ಳಾರಿಜಿಲ್ಲಾ ಪ್ರಥಮ ಕರ್ನಾಟಕ ಏಕೀಕರಣ ಪರಿಷತ್ತು ೧೩-೪-೪೭ಕ್ಕೆ ಶ್ರೀ ಬೆಲ್ಲೋಣಿ ಭೀಮರಾಯರ ಅಧ್ಯಕ್ಷತೆಯಲ್ಲಿ ವೈಭವದಿಂದ ನೆರವೇರಿತು. ಜಿಲ್ಲೆಯ ಎಲ್ಲಾ ಭಾಗಗಳಿಂದಲೂ ಪ್ರತಿನಿಧಿಗಳು ಬಂದಿದ್ದರು. ಶ್ರೀಗಳಾದ ಆರ್. ವಿ. ಜಾಗಿರದಾರ, ನೆಗಳೂರ ರಂಗನಾಥರವರೂ ಬಂದಿದ್ದರು. ಉದ್ಘಾಟಕರಾದ ಶ್ರೀ ಜಿನರಾಜ ಹೆಗ್ಡೆಯವರು ಬಾರದ ಕಾರಣ ಶ್ರೀ ಆರ್. ವಿ. ಜಾಗಿರದಾರರು ಉದ್ಘಾಟನೆಯನ್ನು ಮಾಡಿದರು. ಶ್ರೀಗಳಾದ ಉರವಕೊಂಡ ಸ್ವಾಮಿಗಳು, ದ. ಪ. ಕರಮರಕರ, ಮುಂಬಯಿ ಪ್ರಾಂತದ ಮಂತ್ರಿಗಳಾದ ಮಾನ್ಯ ಎಂ. ಪಿ. ಪಾಟೀಲರು, ಮದ್ರಾಸ ಹರಿಜನೋದ್ಧಾರ ಮಂತ್ರಿಗಳಾದ ಶ್ರೀ ಎ. ಕೂರ್ಮಯ್ಯನವರು, ಔಂಧ ಮಹಾರಾಜರು ಶ್ರೀ ಜಿನರಾಜ ಹೆಗ್ಡೆ, ಶ್ರೀ ಟಿ. ಸುಬ್ರಮಣ್ಯಂ ದೊಡ್ಡನಗೌಡ್ರು, ಲಿಂಗಾರೆಡ್ಡಿ, ದೊಡ್ಡಮೇಟಿ, ಮುದುವೀಡು ಕೃಷ್ಣರಾಯರು ಶುಭ ಸಂದೇಶಗಳನ್ನು ಕಳುಹಿಸಿದ್ದರು. ರಾಷ್ಟ್ರ ಧ್ವಜವು ಶ್ರೀ ಅಸುಂಡಿ ತಿರುಮಲರಾಯರಿಂದಲೂ, ಕನ್ನಡ ಧ್ವಜವು ಶ್ರೀ ರೇವಣಸಿದ್ದಯ್ಯನವರಿಂದಲೂ ಆರೋಹಣವಾಯಿತು. ಅಧ್ಯಕ್ಷರ ಆಯ್ಕೆಯಾದ ನಂತರ ಸ್ವಾಗತ ಸಮಿತಿ ಅಧ್ಯಕ್ಷರಾದ ಶ್ರೀ ಬಿ. ಹರಿಶ್ಚಂದ್ರ ರೆಡ್ಡಿಯವರು ತಮ್ಮ ಭಾಷಣ ಮಾಡಿದರು.

#### ಸ್ವಾಗತಾಧ್ಯಕ್ಷರ ಭಾಷಣ

ಬಳ್ಳಾರಿ ಜಿಲ್ಲೆಯ ಮೊದಲನೆಯ ಏಕೀಕರಣ ಪರಿಷತ್ತನ್ನು ಯಶಸ್ವಿಯಾಗಿ ಜರುಗಿಸಿ ನಮ್ಮನ್ನು ಉತ್ಸಾಹಗೊಳಿಸಲು ಕರ್ನಾಟಕದ ಮೂಲೆ ಮೂಲೆಯಿಂದ ಬಂದ ತಮ್ಮನ್ನು ನಾನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ.

ಇಂದು ಹರಿದು ಹಂಚಿ ಹೋದ ಕರ್ನಾಟಕವು ಒಂದೇ ಆಡಳಿತೆಯ ಪ್ರಾಂತವಾಗಿ ಮೆರೆಯಲು ಹಿಂದಿನ ಇತಿಹಾಸವು ಸ್ಫೂರ್ತಿಯಾಗಿದೆ. ಅದರಂತೆಯೇ ಕರ್ನಾಟಕವು ಕೂಡಲೆ ಒಂದುಗೂಡಿದ ಪ್ರಾಂತವಾಗದಿದ್ದರೆ ಕನ್ನಡಿಗರ ಇಂದಿನ ಜೀವನವೇ ಕುಂಠಿತವಾಗುವುದೆಂದು ಇಂದಿನ ಅನುಭವವು ಹೇಳುತ್ತಿದೆ.

ಭಾಷಾನುಗುಣ ಪ್ರಾಂತಗಳನ್ನು ನಿರ್ಮಿಸುವಾಗ ಅವಸರ ಬೇಡ, ಅನ್ಯಾಯ ಬೇಡ ಎಂಬುದನ್ನು ತಿಳುಹಿಸಿಕೊಡಲು ಬಳ್ಳಾರಿ ಜಿಲ್ಲೆಯಲ್ಲಿ ಈ ಸಮ್ಮೇಳನವನ್ನು ನಾವು ಕರೆದಿದ್ದೇವೆ. ನಮ್ಮ ಜಿಲ್ಲೆಯಲ್ಲಿ ಅವಸರ ಅನ್ಯಾಯ ಎರಡೂ ಆಗಿವೆ ಎಂಬುದಕ್ಕೆ ಕೇಳಕರರ ವರದಿಯೇ ದೃಷ್ಟಾಂತ. ಹಳ್ಳಿಗಳ ನಿತ್ಯ ಜೀವನದ ಭಾಷೆ ಕನ್ನಡವಾಗಿದ್ದಾಗೂ ಚಳವಳಿ ಚತುರರ ಬಲೆಯಲ್ಲಿ ನಾವು ಬಿದ್ದುಕೊಂಡಿದ್ದೇವೆ. ಈ ಹೊಸ ಪ್ರಾಂತಗಳ ಗಡಿನಿರ್ಣಯ ಆಗುವಾಗ ಈ ಅನ್ಯಾಯವನ್ನು ತೆಗೆದುಹಾಕಬೇಕು.



#### ಹೊಸ ಪ್ರಾಂತ ನಿರ್ಣಯ ಈಗಲೆ ಆಗಲೇಬೇಕು

ದೇಶದ ಹೊಸ ರಾಜಕೀಯ ಘಟನೆಯಲ್ಲಿ ಹೊಸ ಪ್ರಾಂತಗಳು ನಿರ್ಮಾಣವಾಗಲೇಬೇಕು. ಈಗಾಗದಿದ್ದರೆ ಇನ್ನು ಮುಂದೆ ಅದು ಕಠಿಣವಾಗುವುದು. ದೇಶದ ಆರ್ಥಿಕ ಜೀವನದಲ್ಲಿ ಕನ್ನಡಿಗರಿಗೆ ಸ್ಥಾನದೊರೆಯದು. ಆದ್ದರಿಂದ ಘಟನಾ ಸಮಿತಿಯು ಕೂಡಿದ ಈ ಕಾಲದಲ್ಲಿಯೆ ನಮ್ಮ ಚಳವಳಿ ಜೋರಾಗಬೇಕಾಗಿದೆ ಇತ್ಯಾದಿ.

#### ಉದ್ಘಾಟಕರ ಭಾಷಣ

ಶ್ರೀ ಜಾಗೀರದಾರರು ಸಭೆಯ ಉದ್ಘಾಟನೆ ಮಾಡುತ್ತಾ "ಕನ್ನಡಿಗರು ಬಹು ಮುಖ ಸಮಸ್ಯೆಗಳನ್ನೆದುರಿಸಿ ಪ್ರಾಂತ ನಿರ್ಮಾಣ ಮಾಡಿಕೊಳ್ಳಬೇಕಾಗಿದೆ. ದೇಶದ ರಾಜಕೀಯ ಪರಿಸ್ಥಿತಿಯೇ ಬದಲಾಗುತ್ತಲಿದೆ. ಬ್ರಿಟಿಶರು ಬಂದು ಮಾಡಿದ ಅನ್ಯಾಯವನ್ನು ಅವರು ಹೋಗುವಾಗ ಸಂಪೂರ್ಣವಾಗಿ ತಿದ್ದಿ ಛಿದ್ರವಾದ ಕರ್ನಾಟಕವನ್ನು ಏಕೀಕೃತಮಾಡಿ ಸ್ವತಂತ್ರ ಹಿಂದುಸ್ಥಾನದಲ್ಲಿ ಸ್ವತಂತ್ರ ಕರ್ನಾಟಕದ ರಚನೆಯನ್ನು ಮಾಡಬೇಕಾಗಿದೆ. ಎಂದರು.

#### ಅಧ್ಯಕ್ಷ ಭಾಷಣ

ಅಧ್ಯಕ್ಷಸ್ಥಾನವನ್ನು ವಹಿಸಿದ್ದ ಶ್ರೀ ಬೆಲ್ಲೋಣಿ ಭೀಮರಾಯರು ಕರ್ನಾಟಕ ಪ್ರಾಂತೀಕರಣಕ್ಕೆ ಕಾಂಗ್ರೆಸ್ಸು ಮನ್ನಣೆ ಕೊಟ್ಟಿದ್ದನ್ನೂ ಏಕೀಕರಣಕ್ಕೆ ಪ್ರಾಂತದೊಳಗಿರುವ ಹಲವು ಸಂಸ್ಥಾನಗಳ ಅಸ್ತಿತ್ವವೂ ಒಂದು ತೊಡಕಾಗಿರುವದನ್ನೂ ತಿಳಿಸಿ ಈ ವರೆಗೆ ಬ್ರಿಟಿಶ ಕರ್ನಾಟಕ ಜಿಲ್ಲೆಗಳ ಏಕೀಕರಣಕ್ಕಾಗಿ ನಡೆದ ಪ್ರಯತ್ನಗಳನ್ನು ಬಣ್ಣಿಸಿದರು. ಮುಂದುವರಿಯುತ್ತ ಅವರು ಹೇಳಿದ್ದು:

#### ಘಟನಾ ಸಮಿತಿಯಲ್ಲಿ ಪ್ರಯತ್ನ

ರಾಜ್ಯಾಂಗ ರಚನೆಗಾಗಿ ಬ್ರಿಟಿಷ್ ಸರಕಾರದ ಸೂಚನೆಗಳ ಪ್ರಕಾರ ಈಗ ಹಿಂದುಸ್ಥಾನವನ್ನು ಮೂರು ಭಾಗಗಳಾಗಿ ವಿಂಗಡಿಸಿರುವ ಕಾರಣ ಭಾಷಾವಾರ ಪ್ರಾಂತ ರಚನೆಯ ಪ್ರಶ್ನೆಯು ಹಿಂದೂಡಲ್ಪಟ್ಟಿದೆ. ಘಟನಾ ಸಮಿತಿಯಲ್ಲಿರುವ ನಮ್ಮ ಸದಸ್ಯರು ಈ ಉದ್ದೇಶ ಸಾಧನೆಗಾಗಿ ಒಳ್ಳೆಯ ಹೋರಾಟವನ್ನೇ ಹೂಡಿರುವರು. ನಮ್ಮ ಶಾಸನ ಸಭ್ಯರೂ ಕೂಡ ಆಂಧ್ರ ಕರ್ನಾಟಕ ಪ್ರಾಂತಗಳ ರಚನೆಗಾಗಿ ಒಂದು ಬಿನ್ನವತ್ತಳೆಯನ್ನು ಘಟನಾ ಸಮಿತಿಗೆ ಅರ್ಪಿಸಿರುವರು.

೧೯೪೮ ನೆಯ ಜೂನದೊಳಗಾಗಿ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವು ಬರುವದರಲ್ಲೇನೂ ಸಂಶಯವಿಲ್ಲದ ಕಾರಣ ಅದರೊಳಗಾಗಿ ಬ್ರಿಟಿಷ್ ಭಾರತದ ಭಾಗಗಳಿಂದ ಸ್ವತಂತ್ರ ಕರ್ನಾಟಕ ಪ್ರಾಂತದ ಉದಯವು ಸಾಧ್ಯವೂ ಸಹಜವೂ ಆಗುವದೆಂದು ನಮಗೆ ತೋರುತ್ತದೆ.

#### ಬಳ್ಳಾರಿ ಜಿಲ್ಲೆಯ ಸ್ಥಿತಿಗತಿ

ಈ ಸಂದರ್ಭದಲ್ಲಿ ನಮ್ಮ ಜಿಲ್ಲೆಯ ಸಮಸ್ಯೆಯನ್ನು ಸ್ವಲ್ಪ ಪರಿಶೀಲಿಸೋಣ. ಪೂರ್ವ ಭಾಗದ ಅನಂತಪುರ ಮತ್ತು ಇತರ ಜಿಲ್ಲೆಗಳಿಂದ ಕನ್ನಡ ಪ್ರದೇಶಗಳನ್ನು ಕರ್ನಾಟಕ ಪ್ರಾಂತದಲ್ಲಿ ಸಮಾವೇಶಗೊಳಿಸುವ ಯೋಜನೆಯ ವಿಮರ್ಶೆಗಾಗಿ ಕಳೆದ ತಿಂಗಳು ಉರುವಕೊಂಡದಲ್ಲಿ ಪೂರ್ವ ಕರ್ನಾಟಕಸ್ಥರ ಮಹಾ ಪರಿಷತ್ತು ಕೂಡಿತ್ತು. ಜನತೆಯ ಅಭಿಪ್ರಾಯಕ್ಕನುಸಾರವಾಗಿ ಇದನ್ನೂ ನಿರ್ಣಯಿಸುವದರಲ್ಲೇನೂ ತಪ್ಪಿಲ್ಲ—ಸದ್ಯಕ್ಕೆ ನಮ್ಮ ಜಿಲ್ಲೆಯ ಸಮಸ್ಯೆಯನ್ನು ನಾವು ಬಗೆಹರಿಸಬೇಕಾಗಿದೆ.

ಕೇಳಕರ ವರದಿಯಲ್ಲಿ ಬಳ್ಳಾರಿ ಕನ್ನಡಿಗರಿಗಾದ ಅನ್ಯಾಯವನ್ನು ವಿವರಿಸುತ್ತಾ ಅಧ್ಯಕ್ಷರು ಹೇಳಿದ್ದು:

೧೯೩೧ರಲ್ಲಿ ಈ ಸಮಿತಿಯವರು ಬಳ್ಳಾರಿ ನಗರವನ್ನು ಮಾತ್ರ ಸಂದರ್ಶಿಸಿ, ಮೂರು ದಿನಗಳು ಮಾತ್ರವಿದ್ದು ಕೇವಲ ಕೆಲವು ಮಹನೀಯರೊಡನೆ ವಿಷಯವನ್ನು ವಿಮರ್ಶಿಸಿ, ತಮ್ಮ ನಿರ್ಧಾರಕ್ಕೆ ಬಂದರು. ಬಳ್ಳಾರಿ, ಸಿರಗುಪ್ಪೆ, ಹೊಸಪೇಟೆ, ಹರಪನಹಳ್ಳಿ, ಹಡಗಲಿ, ಕೂಡ್ಲಿಗೆ ಈ ಆರು ತಾಲೂಕಗಳು ಕನ್ನಡ ತಾಲೂಕುಗಳೆಂದೂ, ಆದವಾನಿ, ಆಲೂರು, ರಾಯದುರ್ಗ ತಾಲೂಕುಗಳು ತೆಲಗು ತಾಲೂಕಗಳೆಂದೂ ನಿರ್ಣಯಿಸಿ, ಆಯಾ ಪ್ರಾಂತೀಯ ಕಾಂಗ್ರೆಸ್ ಸಮಿತಿಗಳ ಆದೇಶಕ್ಕೆ ಅವನ್ನೊಪ್ಪಿಸಿದರು. ಈ ನಿರ್ಣಯಕ್ಕನುಸಾರವಾಗಿ ಕಾಂಗ್ರೆಸ ಅಧಿಕಾರಿಗಳು ಇಲ್ಲಿಯ ವರೆಗೆ ವರ್ತಿಸುತ್ತ ಬಂದಿರುವರು. ಇಂಥ ಪ್ರಾಮುಖ್ಯ ಸಮಸ್ಯೆಯ ನಿರ್ಣಯವನ್ನು ಕೊಡಬೇಕಾದರೆ, ಉಪಯೋಗಿಸಲ್ಪಡುವ ಭಾಷೆಗಳ ಅಂಕಿ ಸಂಖ್ಯೆಗಳನ್ನು ಅವರು ಲಕ್ಷಿಸಲಿಲ್ಲ. ಆಗ ಹಳ್ಳಿಯ ಅಂಕಿ-ಸಂಖ್ಯೆಗಳೂ ದೊರೆಯುತ್ತಲಿದ್ದಿಲ್ಲ. ಇತ್ತೀಚೆಗೆ ಪ್ರಸಿದ್ಧವಾದ ಗ್ರಾಮಗಳ ಜನಗಣತಿ ವಿವರಗಳ ಪ್ರಕಾರಕ್ಕೆ ಆದವಾನಿ, ಆಲೂರ ತಾಲೂಕಗಳ ಅನೇಕ ಗ್ರಾಮಗಳಲ್ಲಿ ತೆಲಗಿಗಿಂತಲೂ, ಕನ್ನಡವೇ ಅಧಿಕವಾಗಿ ಬಳಸಲಾಗುತ್ತಿದೆ. ಕೇಳಕರ ಸಮಿತಿಯವರು ಈ ಮೂರು ತಾಲೂಕಗಳ ಭಾಷೆಯ ವಿಮರ್ಶೆಯನ್ನು ಅಂಕಿ—ಸಂಖೆಗಳಿಂದ ನೋಡಿದ್ದರೆ ಅವರ ನಿರ್ಣಯವೇ ಬೇರೆಯಾಗುತ್ತಿತ್ತೆಂದು ನನ್ನ ದೃಢನಂಬಿಕೆ. ಇಡೀ ಬಳ್ಳಾರಿ ಜಿಲ್ಲೆಯು ಕರ್ನಾಟಕ ಪ್ರಾಂತದಲ್ಲಿ ಸಮಾವೇಶವಾಗಬೇಕೆಂಬ ತಮ್ಮ ತೀರ್ಮಾನ, ಮತ್ತು ಧ್ಯೇಯನಿರ್ಧಾರಗಳನ್ನು ಪ್ರಮುಖ ವ್ಯಕ್ತಿಗಳೂ ಅನೇಕ ಸಭೆಗಳೂ ಸಂಬಂಧಿಸಿದವರಿಗೆ ಕಳುಹಿಸಿವೆ.

#### ಜನಾಭಿಪ್ರಾಯದಂತೆ ಸಾಗಿರಿ

ಘಟನಾ ಸಮಿತಿಯು ಭಾಷಾವಾರ ಪ್ರಾಂತ ವಿಭಜನೆಯ ತತ್ವವನ್ನು ಮಾನ್ಯ ಮಾಡಿ ಅದನ್ನು ಕಾರ್ಯ ಗಡಿನಿರ್ಣಯ ರೂಪಕ್ಕೆ ತರಲು ಗಡಿನಿರ್ಣಯ ಸಮಿತಿಯನ್ನು ರಚಿಸಿದಾಗ ಪ್ರಜಾಭಿಮತವನ್ನು ತೆಗೆದುಕೊಂಡು ಈ ಪ್ರಶ್ನೆಯನ್ನು ನಿರ್ಣಯಿಸುವುದು ಸರಿಯಾದ ಮಾರ್ಗವೆಂದು ನನ್ನ ಅಭಿಪ್ರಾಯ.

ಗಡಿನಿರ್ಣಯ ಸಮಿತಿಯವರು ಅಧಿಕ ಸಂಖ್ಯಾಕರ ನಿರ್ಣಯವನ್ನು ಒಪ್ಪಲೇಬೇಕು. ಈ ಪದ್ಧತಿಯನ್ನನುಸರಿಸಲಾಗದಿದ್ದರೆ ಈ ಜಿಲ್ಲೆಯ ಮುಖ್ಯ ಭಾಷೆಯು ಕನ್ನಡವಾಗಿರುವ ಕಾರಣ ಇಡೀ ಜಿಲ್ಲೆಯನ್ನು ಛಿದ್ರಮಾಡದಂತೆ, ಕರ್ನಾಟಕ ಪ್ರಾಂತದಲ್ಲಿ ಸಮಾವೇಶಗೊಳಿಸಬೇಕಾನ್ಯಾಯವಾಗಿದೆ. ಅಲ್ಲಿಯ ವರೆಗೆ ನಾವು ಹಳ್ಳಿಗಳಲ್ಲಿ ಪ್ರಚಾರಕ್ಕೇರ್ಪಡಿಸಿ ಕನ್ನಡದ ಪ್ರಮುಖಸ್ಥಾನವನ್ನು ಜನರಿಗೆ ತಿಳಿಯಪಡಿಸಿ ಇಡೀ ಜಿಲ್ಲೆಯ ಕರ್ನಾಟಕ ಪ್ರಾಂತದಲ್ಲಿ ಸೇರಬೇಕಾದ ವಾತಾವರಣವನ್ನು ಕಲ್ಪಿಸಬೇಕು.

ಬಳ್ಳಾರಿ ಜಿಲ್ಲೆಯನ್ನು ಆಂಧ್ರ ವಿಶ್ವವಿದ್ಯಾಲಯದ ಕಕ್ಷೆಯೊಳಗೆ ಸೇರಿಸಲು ಈಗ ನಡೆದಿರುವ ಪ್ರಯತ್ನಗಳನ್ನು ಕನ್ನಡಿಗರು ಪ್ರತಿಭಟಿಸಬೇಕೆಂದು ಹೇಳಿ ಅಧ್ಯಕ್ಷರು ಭಾಷಣವನ್ನು ಕೊನೆಗೊಳಿಸಿದರು.

#### ಸ್ವೀಕೃತವಾದ ಗೊತ್ತುವಳಿಗಳು

(೧) ಭಾಷಾವಾರ ಪ್ರಾಂತ ನಿರ್ಮಾಣ ತತ್ವವು ಸರ್ವ ಸಮ್ಮತವಾಗಿದ್ದು ಸದ್ಯಕ್ಕೆ ಸೇರಿದ ಘಟನಾಸಮಿತಿಯು ಹೊಸ ಘಟನೆಯ ಅಂಗವಾಗಿಯೆ ಪ್ರತ್ಯೇಕ ಕರ್ನಾಟಕ ಪ್ರಾಂತ ರಚನೆಯನ್ನು ಮಾಡಬೇಕೆಂದೂ ನಮ್ಮ ಘಟನಾಸಮಿತಿ ಪ್ರತಿನಿಧಿಗಳು ಪ್ರತ್ಯೇಕ ಕರ್ನಾಟಕದ ಘಟನೆಗಾಗಿ ಒತ್ತಾಯ ಪಡಿಸಬೇಕೆಂದೂ, ಇದನ್ನೊಳಗೊಳ್ಳದ ನೂತನ ಘಟನೆಯನ್ನು ಕನ್ನಡಿಗರೊಪ್ಪುವದಿಲ್ಲವೆಂದೂ ಈ ಸಭೆಯು ಸಾರುತ್ತದೆ.

(೨) ಘಟನಾಸಮಿತಿಯ ಸಲಹೆಗಾರರಾದ ಶ್ರೀ ಬಿ. ಎನ್. ರಾಯರ ಸೂಚನೆಗಳು ಸ್ವತಂತ್ರ ಕರ್ನಾಟಕ ಪ್ರಾಂತಕ್ಕೆ ಘಾತವಾಗಿರುವ ಕಾರಣ ಈ ಅವನ್ನು ಈ ಸಭೆಯು ಖಂಡಿಸುತ್ತದೆ.

(೩) ಬಳ್ಳಾರಿ ಜಿಲ್ಲೆಯು ಪೂರ್ಣ ಕನ್ನಡವಿದ್ದು, ಕೇಳಕರ ವರದಿಯು ತಪ್ಪು ಮಾಹಿತಿಯಿಂದ ಕೂಡಿ ತೀರ ಅನ್ಯಾಯದ್ದಾಗಿದೆ. ಜಿಲ್ಲೆಯ ಪ್ರತಿಯೊಂದು ಹಳ್ಳಿಯಲ್ಲಿ ಏಕೀಕರಣ ಸಂಘವನ್ನು ಸ್ಥಾಪಿಸಿ— ಪ್ರಚಾರ ಮಾಡಿ ಸಂಬಂಧಿಸಿದವರಿಗೆ ತಿಳುಹಿಸಲು ಈ ಸಭೆಯು ನಿರ್ಣಯಿಸುತ್ತದೆ.

(೪) ಮದ್ರಾಸ ಪ್ರಭುತ್ವದವರು ದತ್ತ ಮಂಡಲದಲ್ಲಿರುವ ಕಲಾಶಾಲೆ ಮತ್ತು ಇನ್ನಿತರ ವಿದ್ಯಾನಿಲಯಗಳನ್ನು ಆಂಧ್ರ ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಸೇರಿಸಲು ಒಂದು ಸಮಿತಿಯನ್ನು ನಿರ್ಮಿಸಿರುವರು. ಬಳ್ಳಾರಿ, ಅನಂತಪುರ ಮತ್ತಿತರ ಕನ್ನಡ ಪ್ರದೇಶಗಳಲ್ಲಿಯ ವಿದ್ಯಾಸಂಸ್ಥೆಗಳನ್ನು ಆಂಧ್ರ ಕ್ಷೇತ್ರಕ್ಕೆ ಸೇರಿಸಬಾರದೆಂದು ಈ ಸಭೆಯು ತೀರ್ಮಾನಿಸುತ್ತದೆ.

(೫) ಬಳ್ಳಾರಿಯಂಥ ಕನ್ನಡ ಜಿಲ್ಲೆಯಲ್ಲಿ ಮತ್ತು ಸಾಮಾನ್ಯವಾಗಿ ಎಲ್ಲ ಕನ್ನಡ ಜಿಲ್ಲೆಗಳಲ್ಲಿ ಕಳೆದ ಅನೇಕ ವರ್ಷಗಳಿಂದ ಏಕಕಂಠವಾಗಿ ಕನ್ನಡಿಗರು ಕೇಳಿಕೊಂಡರೂ ಕನ್ನಡ ಅಧಿಕಾರಿಗಳನ್ನು ನಿಯಮಿಸದಿರುವ ಧೋರಣೆಯನ್ನು ಈ ಸಭೆಯು ತೀವ್ರವಾಗಿ ಖಂಡಿಸುವುದಲ್ಲದೆ ಕರ್ನಾಟಕವು ಪ್ರತ್ಯೇಕ ಪ್ರಾಂತವಾದ ಹೊರತು ನ್ಯಾಯದೊರೆಯುವದಿಲ್ಲೆಂದೂ ಕೂಡಲೆ ಪ್ರಾಂತ ನಿರ್ಮಾಣವಾಗಬೇಕೆಂದೂ ಸೂಚಿಸುತ್ತದೆ.

(೬) ಭಾಷಾವಾರ ಪ್ರಾಂತ ಘಟನೆಯ ಶೀಘ್ರದಲ್ಲಿಯೆ ಕಾರ್ಯ ರೂಪದಲ್ಲಿ ಬರುವುದು ದಿಟ್ಟವಿದ್ದರಿಂದ ಎರಡು ಬೇರೆ ಬೇರೆ ಭಾಷಾತ್ಮಕ ಪ್ರದೇಶಗಳಿಗೆ ಸಂಬಂಧಿಸಿದ ಆರ್ಥಿಕ ಯೋಜನೆಗಳನ್ನು ಸದ್ಯದ ಪ್ರಾಂತಿಕ ಸರಕಾರಗಳು ಕೈಕೊಳ್ಳಬಾರದೆಂದು ಅಭಿಪ್ರಾಯಪಟ್ಟು ಅದಕ್ಕೆ ಅನ್ವಯಿಸಿ ಸದ್ಯದ ತುಂಗಭದ್ರಾ ಯೋಜನೆಯ ಕೆಲಸವನ್ನು ತಡೆಯುವಂತೆ ಮದ್ರಾಸ ಮಂತ್ರಿಮಂಡಳಕ್ಕೂ ಕಾಂಗ್ರೆಸ ಅಧ್ಯಕ್ಷರಿಗೂ ಕೇಳಿಕೊಳ್ಳಬೇಕು.

ಶ್ರೀ ಗಂಗಾವತಿಯವರು ತಂದ ತುಂಗಭದ್ರಾ ಯೋಜನೆಯ ಸಂಬಂಧದ ಈ ತೀರ್ಮಾನಕ್ಕೆ ಶ್ರೀ ಅಸುಂಡಿ, ವೆಂಕೋಬರಾವ್ ಪಗ್ಗೆರೆ ಅನೇಕ ಮಹನೀಯರ ಭಾಷಣಗಳಾಗಿ ಚರ್ಚೆಯನಂತರ ಸರಕಾರದ ಕಡೆಯಿಂದ ಕಳ್ಳ ಅಂಕಿ ಸಂಖೆಗಳನ್ನು ದೊರಕಿಸುವ ಆಶ್ವಾಸನವನ್ನು ಅಧ್ಯಕ್ಷರಾದ ಶ್ರೀ ಭೀಮರಾಯರು ಕೊಟ್ಟ ಕಾರಣ ಸೂಚಕರು ಇದನ್ನು ಮತಕ್ಕೆ ಹಾಕಲು ಒತ್ತಾಯ ಪಡಿಸಲಿಲ್ಲ.

೭) ಆಲೂರ ಹೈಸ್ಕೂಲಿನಲ್ಲಿ ಕನ್ನಡ ಶಿಕ್ಷಣದ ಅವಕಾಶ ಮಾಡಿಕೊಡಬೇಕೆಂದು ಈ ಸಭೆಯು ಒತ್ತಾಯ ಪಡಿಸುತ್ತದೆ.

## ಮುಂಬಯಿ ಶಾಸನ ಸಭೆ

ತಾ ೧೧ಕ್ಕೆ ಪ್ರಶ್ನೋತ್ತರದ ಕಾಲದಲ್ಲಿ ಪೂರೈಕೆ ಮಂತ್ರಿಗಳು ಅಯೋಗ್ಯ ಸಂಗ್ರಹ ವ್ಯವಸ್ಥೆಯಿಂದ ಪ್ರಾಂತದಲ್ಲಿ ಧಾನ್ಯ ಕೆಟ್ಟು ಹೋದುದು ಅಸತ್ಯವೆಂದು ತಿಳಿಸಿದರು.

ಜೋಗದಿಂದ ಕಾರವಾರ ಜಿಲ್ಲೆಗೆ ವಿದ್ಯುತ್ ಪೂರೈಕೆಯಾಗದಿದ್ದರೆ ಜಿಲ್ಲೆಯ ಶಾಸನ ಸಭಾ ಸದಸ್ಯರು ರಾಜೀನಾಮೆ ಕೊಟ್ಟು ಹೊರಬರಬೇಕೆಂದು ಕಾರವಾರ ಜಿಲ್ಲಾ ಗ್ರಾಮಾಭಿವೃದ್ಧಿ ಸಂಘದವರು ತಿಳಿಸಿದ್ದು ತಮಗೆ ಗೊತ್ತಿದೆಯೆಂದೂ ಆದರೆ ಆ ಜಿಲ್ಲೆಗೆ ಜೋಗ ವಿದ್ಯುತ್ ಸುಲಭವಾಗುವದೋ ಕಾಳೀ ನದಿಯ ವಿದ್ಯುತ್ತು ಸುಲಭವಾಗುವದೋ ಎಂಬುದು ಇನ್ನೂ ತೀರ್ಮಾನವಾಗಿಲ್ಲೆಂದು ಡಾ. ಗಿಲ್ಡರರು ತಿಳಿಸಿದರು.

ಮಾಧ್ಯಮಿಕ ಶಿಕ್ಷಕರಿಗೆ ತಾತ್ಕಾಲಿಕ ಪರಿಹಾರ ಕೊಡಬೇಕೆಂಬ ಬೇಡಿಕೆ ಸರಕಾರದ ಪರಿಶೀಲನೆಯಲ್ಲಿದೆಯೆಂದು ಮುಖ್ಯಮಂತ್ರಿಗಳು ತಿಳಿಸಿದರು.

ಮಾರಾಟಕರ ತಿದ್ದುಪಡಿ ಮಸೂದೆಯನ್ನು ಸಭೆ ಸ್ವೀಕರಿಸಿತು.

ಕಮ್ಯುನಿಸ್ಟ್ ಸದಸ್ಯರಾದ ಡಾಂಗೆಯವರು ಹಿಂದೊಂದು ದಿನ ಸಭೆಯಲ್ಲಿ ಮಾಡಿದ ಒಂದು ಭಾಷಣದಲ್ಲಿ ನಿರಾಧಾರವಾದ ಆರೋಪಗಳನ್ನು ಸಭೆಯಲ್ಲಿಲ್ಲದ ನಾಗರಿಕರೊಬ್ಬರ ಮೇಲೆ ಮಾಡಿದ್ದರಿಂದ ಆ ಭಾಷಣದ ಅಂಶವನ್ನು ಸಭಾ ಕಾರ್ಯಕಲಾಪಗಳಿಂದ ತೆಗೆದು ಹಾಕಲು ನಿರ್ಣಯಿಸಲ್ಪಟ್ಟಿತು.

ತಾ. ೧೨ ಕ್ಕೆ ಶಾಸನ ಸಭೆಯ ಈ ಅಧಿವೇಶನ ಮುಗಿಯಿತು.

## ಅಸಾಮ

ಅಸಾಮದ ನಿಯೋಜಿತ ಗವರ್ನರರಾದ ಸರ್ ಅಕ್ಬರ್ ಹೈದರಿಯವರು ಮೇ ಮೂರನೆ ತಾರೀಕಿಗೆ ತಮ್ಮ ಅಧಿಕಾರ ಸೂತ್ರವನ್ನು ವಹಿಸುವರು. ಅಸಾಮದ ಮುಖ್ಯ ಮಂತ್ರಿ ಬಾರ್ದೋಲಾಯಿಯವರು ಘಟನಾ ಸಮಿತಿಯ ಸಭೆಗೆ ದಿಲ್ಲಿಗೆ ಹೋದಾಗ ಸರ್ ಅಕ್ಬರ ಹೈದರಿಯವರು ಅವರ ಭೆಟ್ಟಿ ತೆಗೆದುಕೊಳ್ಳುವರು.

ಸಿಲ್ಹೆಟದಲ್ಲಿ ಸಾಮುದಾಯಿಕ ಕಾಯದೇ ಭಂಗ ಚಳವಳಿಯನ್ನು ಪ್ರಾರಂಭಿಸಿ ದೊಡ್ಡ ಪ್ರಮಾಣದಲ್ಲಿ ಸುರಂಗಗಳನ್ನು ತುಂಬಿಡಬೇಕೆಂದು ಸಿಲ್ಹೆಟ ಜಿಲ್ಲಾ ಸಮಿತಿ ಲೀಗಿನವರು ನಿರ್ಣಯಿಸಿದ್ದಾರೆ. ದಿನಾಲು ಲೀಗಿನ ಸಭೆ ಮೆರವಣಿಗೆಗಳು ನಡೆಯುತಲಿವೆ. ಪೋಲೀಸರ ಕಾವಲು ಅತ್ಯುಗ್ರವಾಗಿದೆ.

ಹೊಲಗಳ ಸಂಬಂಧದಲ್ಲಿ ೧೯೪೫ರಲ್ಲಿ ತ್ರಿಪಕ್ಷಗಳಲ್ಲಿ ಆದ ಕರಾರಗಳನ್ನು ಅಸಾಮ ಮಂತ್ರಿಮಂಡಳ ಮುರಿಯುವದೆಂದು ಮುಸ್ಲಿಂಲೀಗಿನ ಸಾದುಲ್ಲಾರವರು ಮಾಡಿದ ಆರೋಪವನ್ನು ಅರ್ಥಮಂತ್ರಿ ವಿಷ್ಣುರಾಮ ಮೇಧಿ ಅವರು ನಿರಾಕರಿಸಿದ್ದಾರೆ. ಜನತೆಯ ಭಾವನೆಗಳನ್ನು ಉದ್ರೇಕಿಸಿ ಲೀಗಿನ ಚಳವಳಿಗೆ ಸಹಾಯ ಮಾಡಬೇಕೆಂದು ಈ ಬಗೆಯ ಆರೋಪ ಮಾಡಲಾಗುತಿದೆಂದೂ ಅವರ ಆರೋಪ.

ಫಲ್ಟಣದ ರಾಜೇಸಾಹೇಬರು ಸರಕಾರ ಪಟೇಲರ ಕೋಠಾಧ್ಯಕ್ಷತೆಯಲ್ಲಿ ಕೂಡಿಸುತಿರುವ ಪಂಜಾಬ ಪರಿಹಾರ ನಿಧಿಗೆ ೨೦೦೦ ರೂಪಾಯಿಗಳನ್ನು ಕಾಣಿಕೆ ಕೊಟ್ಟಿದ್ದಾರೆ.

ದಕ್ಷಿಣ ಸಂಸ್ಥಾನಗಳ ಮತ್ತು ಕೊಲ್ಹಾಪುರದ ಹೊಸ ರೆಸಿಡೆಂಟರಾಗಿ ನೇಮಿಸಲ್ಪಟ್ಟ ಲೆಫ್ಟಿನೆಂಟ ಕರ್ನಲ್ ಫಿಟ್ಜ ಜೆರಾಲ್ಡ ಅವರು ೧೪ ಕ್ಕೆ ಕೊಲ್ಹಾಪುರಕ್ಕೆ ಹೋಗಿ ಅಧಿಕಾರ ಸ್ವೀಕರಿಸುವರು.

## ವಾರದ ಕತೆ




ಜಯವಂತ ವಿಜಯನಿಗಿಂತ ಒಂದು ವರ್ಷಕ್ಕೆ ಚಿಕ್ಕವ. ಜಯ ವಿಜಯರಿಬ್ಬರೂ ಚಿಕ್ಕಂದಿನಲ್ಲಿ ತಂದೆಯನ್ನು ಕಳೆದುಕೊಂಡು ಪರದೇಶಿಯಾಗಿದ್ದರು. ಇವರ ತಾಯಿ ನಲಿನಿ ಬಹು ಶ್ರಮಬಟ್ಟು ಇವರನ್ನು ದೊಡ್ಡವರನ್ನಾಗಿ ಮಾಡಿದಳು. ಜಯ, ವಿಜಯನಕಿಂತ ಚಿಕ್ಕವನಾದರೂ ಮಹಾ ಸಾಹಸಿ, ಸ್ಥಿರ ಮನಸ್ಸಿನ ಹುಡುಗ. ಯಾವಾಗಲೂ ಎಲ್ಲರ ಸಂಗಡಲೂ ನಗುತ್ತ ಆಡುತ್ತ ಎಲ್ಲ ಹುಡುಗ ಹುಡುಗಿಯರ ಮನಸ್ಸನ್ನು ತನ್ನ ಕಡೆಗೆ ಎಳೆದುಕೊಳ್ಳುವ ಕಲಾವಂತ. ಅವನ ಮಾತನ್ನು ಯಾರು ಅಲ್ಲಗಳೆಯುತ್ತಿದ್ದಿಲ್ಲ. ಅವನ ಸಂಗಡಿಗರೆಂದರೆ—ಕುಲಕರ್ಣಿ ಕಿಟ್ಟು, ನಾಯಕರ ಸದು, ಜೋಯಿಸರ ನಾರಾಯಣ, ಭಾಗವತರ ಇಂದು, ಅಣ್ಣ ವಿಜಯ, ಅಲ್ಲದೆ ಅನೇಕ ಹುಡುಗರಿದ್ದರು. ಇವರೆಲ್ಲರೂ ಸರಾಸರಿ ಒಂದೇ ವಯಸ್ಸಿನವರಾಗಿದ್ದರೂ ಅವರವರ ದೇಹಗುಣಗಳಿಗನುಸಾರವಾಗಿ ಹಿರಿಕಿರಿತನವನ್ನು ಕಂಡು ಹಿಡಿಯಲಿಕ್ಕೆ ಬರುತ್ತಿತ್ತು.

ಭಾಗವತರ ಇಂದು ಜಯನಕಿಂತ ಎರಡು ವರ್ಷಕ್ಕೆ ಚಿಕ್ಕವಳು. ಜಯನ ಮನೆ ಮತ್ತು ಭಾಗವತರ ಮನೆ ಒಂದಕ್ಕೊಂದು ಹತ್ತಿ ಇದ್ದವು. ಇಂದುವಿನ ತಂದೆ-ತಾಯಿಗಳು ಶ್ರೀಮಂತರು. ಮನೆಯಲ್ಲಿ ಯಾವದಕ್ಕೂ ಕೊರತೆಯಿಲ್ಲ. ಮನೆಗೆ ಮಕ್ಕಳೆಂದರೆ ಇಂದು ಒಬ್ಬಳೇ. ಜಯ ವಿಜಯರ ತಂದೆ ತೀರಿಕೊಳ್ಳಲು ಇಂದುನ ತಂದೆಯೆ ಇವರ ಮನೆಯ ಹೋಗುಬರುವದನ್ನೂ ಉಳಿ ತಾಯವನ್ನೂ ನೋಡುತ್ತಿದ್ದನು. ವಿಜಯ ಮನಸ್ಸಿನಿಂದ ಮುಗ್ಧ. ಬೆಲ್ಲ ಬಡಿದ ಕಲ್ಲಿನಂತೆ ಕುಳಿತು ಬಿಡುವ. ಹುಡುಗರ ಸಂಗಡ ಮನಬಿಚ್ಚಿ ಆಡುವವನಲ್ಲ. ತಮ್ಮನ ಆಟ ನೋಡೇ ಆನಂದ ಪಡುವವ.

ಅಗ್ಗೆ ಇವರ ವಯಸ್ಸು ೭ ಅಥವಾ ೮ ಇರಬಹುದು. ಎಲ್ಲರೂ ಕೂಡಿ ರಂಗಾಚಾರ್ಯರ ಹಿತ್ತಲದಲ್ಲಿದ್ದ ಪೇರಲ ಗಿಡಕ್ಕೆ ಮುತ್ತಿಗೆ ಹಾಕುವದನ್ನು ನಿಶ್ಚಯಿಸಿದರು. ಎಲ್ಲರ ಊಟವಾಗಿತ್ತು. ಮಧ್ಯಾಹ್ನ ಎರಡು ಗಂಟೆಯ ಸಮಯ, ತಾಯಿ ಮಲಗಿರುವದನ್ನು ಕಂಡು ಜಯ ವಿಜಯನಿಗೆ ಸನ್ನೆ ಮಾಡಿದ. ವಿಜಯ ಕೈಯೊಳಗಿನ ಪುಸ್ತಕವನ್ನು ಬಿಡದೆ ತಾಯಿಯ ಕಡೆಗೆ ಸನ್ನೆ ಮಾಡಿ ಬೇಡವೆಂದು ಹೇಳಿದ. ಆದರೆ ನಿಶ್ಚಯಮೂರ್ತಿಯಾದ ಜಯ ಕೇಳುವನೆ, ಅಣ್ಣನ ಕೈಯೊಳಗಿನ ಪುಸ್ತಕ ಕಿತ್ತೊಗೆದು ಅವನ ರಟ್ಟೆ ಹಿಡಿದು ಎಬ್ಬಿಸಿದ. ಸಪ್ಪಳ ಮಾಡದಲೆ ಬಾಗಿಲ ತೆರೆದು ಇಬ್ಬರೂ ಹೊರಬಿದ್ದರು. ಎಲ್ಲರೂ ನಡುಮಾರುತಿಯ ಗುಡಿಯಲ್ಲಿ ಸೇರತಕ್ಕದ್ದೆಂದು ನಿಶ್ಚಯಿಸಿದ್ದರು. ಅದರಂತೆ ಎಲ್ಲರೂ ಬಂದ ಕೂಡಲೆ ಜಯ ಎಲ್ಲರಿಗೂ ತಕ್ಕ ಸೂಚನೆಗಳನ್ನು ಹೇಳಿದನು. ಮತ್ತು ಎಲ್ಲರು ತನ್ನನ್ನು ಹಿಂಬಾಲಿಸಲು ಹೇಳಿದನು.

ರಂಗಾಚಾರ್ಯರ ಹಿತ್ತಲವೆಂದರೆ ಅದೊಂದು ಸಣ್ಣ ಅಡವಿಯೆ. ಅಲ್ಲಿ ಪೇರಲ ಹಣ್ಣುಗಳ ಆಶೆಯಿಂದ ಹೋಗಿ ಹಾವು ಕಡಿಸಿಕೊಂಡು ಸತ್ತಂಥ ಎಷ್ಟೋ ಉದಾಹರಣೆಗಳಿದ್ದವು. ಮತ್ತು ಅನೇಕ ದಂತಕಥೆಗಳೂ ಆ ಹಿತ್ತಲ ಬಗ್ಗೆ ಜನರು ಹೇಳುತ್ತಿದ್ದರು. ಆದರೆ ಪಾಪ ಈ ಚಿಕ್ಕ ಬಾಲಕರಿಗೇನು ಗೊತ್ತು ಆ ಎಲ್ಲ ಸಂಗತಿಗಳು. ಎಲ್ಲರು ಗದ್ದಲ ಮಾಡದಲೆ ಹಿತ್ತಲದಲ್ಲಿ ಸೇರಿದರು. ಜಯ ಪೇರಲ ಗಿಡಕ್ಕೆ ನಮಸ್ಕಾರ ಮಾಡಿ ಗಿಡವನ್ನೇರಿದನು. ಎಲ್ಲರ ಹೆಸರು ತೆಗೆದುಕೊಳ್ಳುತ್ತ ಮೇಲಿನಿಂದ ಹಣ್ಣು ಒಗೆಯಹತ್ತಿದನು. ಬುಡದಲ್ಲಿಯ ಹುಡುಗರು ಸಾಕಾದಷ್ಟು ತಿಂದು ಉಳಿದವುಗಳನ್ನು ಒಂದು ಚೀಲದಲ್ಲಿ ತುಂಬಿದರು. ಜಯ ತಾನು ಗಿಡದ ಮೇಲೇ ಕುಳಿತು "ಈಗ ನಾನು ಹನುಮಂತನಂತೆ ಕಾಣುವೆನೆ?" ಎಂದು ಕೇಳುವನು. ಜಯ ಗಿಡವಿಳಿದಬಳಿಕ ಎಲ್ಲರೂ ಮನೆಯ ಕಡೆಗೆ ಹೊರಟರು.

ಇದಾಗುವದರಲ್ಲಿ ರಂಗಾಚಾರ್ಯರು ತಮ್ಮ ಹಿತ್ತಲದಲ್ಲಿ ತುಂಟ ಜಯನು ತನ್ನ ಸಂಗಡಿಗರೊಂದಿಗೆ ಪ್ರವೇಶ ಮಾಡಿದ್ದನ್ನು ನೋಡಿ ಭಾಗವತರಿಗೆ ತಿಳಿಸಬೇಕೆಂದು ಅವರ ಮನೆಗೆ ಹೋಗಿದ್ದರು. ಈ ಎಲ್ಲ ಬಾಲಕರು ಭಾಗವತರ ಮನೆಯ ಕಡೆಗೆ ಬರುತ್ತಿರಲು ಭಾಗವತರ ಪಡಶಾಲೆಯಲ್ಲಿ ರಂಗಾಚಾರ್ಯರನ್ನೂ ಇನ್ನೂ ನಾಲ್ಕೈದು ಜನರನ್ನೂ ಜಯ ನೋಡಿದನು. ಸಂಗಡಿಗರಿಗೆ ಏನೂ ಮಾತಾಡದಲೆ ತಮ್ಮ ತಮ್ಮ ಮನೆಗಳಿಗೆ ಹೋಗಲು ಹೇಳಿದ. ತಾನು ವಿಜಯ ಮತ್ತು ಇಂದು ಮೂವರೆ ಭಾಗವತರ ಮನೆಯನ್ನು ಹೊಕ್ಕರು. ರಂಗಾಚಾರ್ಯರ ಮುಖ ದುಮುದುಮು ಉರಿಯುತ್ತಿತ್ತು. ಭಾಗವತರು ತಮ್ಮ ಇಂದುವಿನ ಮೇಲೆ ಒಳ್ಳೆ ಸಿಟ್ಟಿಗೆದ್ದಿದ್ದರು. ಅವರು ಬರುತ್ತಲೆ ಭಾಗವತರು ಕೇಳಿದರು "ಏನೊ ವಿಜಯಾ, ಎಲ್ಲಿಗೆ ಹೋಗಿದ್ದಿರಿ?" ಅದಕ್ಕೆ ವಿಜಯನಿಗೆ ಉತ್ತರ ಕೊಡಲು ಸಾಧ್ಯವಾಗಲಿಲ್ಲ. ಕೂಡಲೆ ಜಯ ಹೇಳಿದ "ಎಲ್ಲೂ ಇಲ್ಲ ಇಲ್ಲೆ ರಂಗಾಚಾರ್ಯರ ಕಾಡಿಗೆ ಹೋಗಿದ್ದೆವು. ಯಾಕಂದರೆ ಈಗಿನಿಂದ ಕಾಡಿನಲ್ಲಿ ತಿರುಗುವದು ಅಭ್ಯಾಸಬೇಕು. ಕಾಕಾ, ನೋಡು ಶ್ರೀರಾಮನು ಕಾಡಿನಲ್ಲಿ ತನ್ನ ತಮ್ಮ, ಹೆಂಡತಿಯೊಡನೆ ತಿರುಗಲಿಲ್ಲವೆ? ಅವನು ಎಷ್ಟು ಕಷ್ಟಬಟ್ಟಿರಬಹುದು? ಕಾಕಾ, ನಮಗೆ ಮಾತ್ರ ಒಂದು ಮುಳ್ಳು ಸಹ ನಡಲಿಲ್ಲ. ಆಚಾರ್ಯರ ಹಿತ್ತಲ ಬಹಳ ಚಲೊ ಅದೆ." ಅಂದವನೆ ಆಚಾರ್ಯರ ಬೆನ್ನು ಹಿಂದೆ ಬಂದು ಆಚಾರ್ಯರ ಕೊಳ್ಳಿಗೆ ತನ್ನ ಕೈಗಳಿಂದ ಜೋತುಬಿದ್ದನು. ಆಚಾರ್ಯರ ಸಿಟ್ಟೆಲ್ಲ ಗಾಳಿಗೆ ಹಾರಿಹೋಯಿತು. ಅದರೆ ಮುಖವು ಕಪ್ಪಿಟ್ಟಿತು. ತಾವು ಎಷ್ಟು ಜನರನ್ನು ನೆರೆಸಿದ್ದು ವ್ಯರ್ಥವಾಯಿತು. ಇಷ್ಟೇ ಅಲ್ಲ ಈ ಹುಡುಗನ ಮಾತಿಗೆ ಎಲ್ಲರೂ ಬೊಳ್ಳೆಂದು ನಕ್ಕರು. ಒಬ್ಬೊಬ್ಬರೆ ಜಯನ ಗಲ್ಲವನ್ನು ಹಿಡಿಯುತ್ತ "ಇನ್ನೊಮ್ಮೆ ಆಚಾರ್ಯರ ಹಿತ್ತಲಗೊಡವಿಗೆ ಹೋಗಬೇಡ" ಎಂದು ಹೇಳುತ್ತ ಹೊರಟು ಹೋದರು.

ಜಯನಿಗೆ ಶಾಲೆಯ ಕಡೆಗೆ ಸ್ವಲ್ಪೂ ಮನಸ್ಸಿಲ್ಲ. ನದಿಯ ದಂಡೆಯಲ್ಲಿ ಆಡುವದು, ಹೊತ್ತಾದಂತೆ ಮನೆ ಸೇರುವದು ಇವನ ಕೆಲಸವಾಗಿತ್ತು. ನಲಿನಿ ಬೇಸತ್ತಿದ್ದಳು. ಎಲ್ಲ ಗೆಳೆಯರನ್ನು ನದಿಗೆ ಕರೆದುಕೊಂಡು ಹೋಗುವನು. ಡೋಣಿಯ ಒಡೆಯ ಇಲ್ಲದ್ದನ್ನು ಕಂಡು ಎಲ್ಲರಿಗು ಡೋಣಿಯಲ್ಲಿ ಕೂಡ ಹೇಳುವನು. ಮತ್ತು ಡೋಣಿಯ ಹಗ್ಗ ಬಿಚ್ಚಿ ತಾನು ಅದರಲ್ಲಿ ಹಾರಿಕೊಂಡು ಅದರ ಹುಟ್ಟು ಹಾಕಲಿಕ್ಕೆ ಕಲಿಸುವನು. ಸುದೈವದಿಂದ ಅವರು ಎಷ್ಟೋ ಸಾರೆ ಆಚೆಯ ದಂಡೆಯನ್ನು ಮುಟ್ಟಿದ್ದರು. ಆ ಬಳಿಕ ಡೋಣಿಯ ಒಡೆಯರು ಗಾಬರಿಯಾಗಿ ಈಜುತ್ತ ಹೋಗಿ ತಿರುಗಿ ಅವರನ್ನು ಈಚೆಯ ದಡಕ್ಕೆ ಕರೆದುಕೊಂಡು ಬಂದದ್ದುಂಟು.

ರಸ್ತೆಯ ಮೇಲೆ ಯಾರಾದರು ಬಡಿದಾಡುತ್ತಿದ್ದರೆ ಸಾಕು ಜಯ ಓಡುತ್ತ ಬರುವ. ಆ ಬಡಿದಾಡುವವರ ಮಧ್ಯ ಬಂದು "ಅಜ್ಜಾ ಅಜ್ಜಾ ಏಕೆ ಏನಾಗಿದೆ? ಏಕೆ ಬಡಿದಾಡುವಿರಿ?" ಎಂದು ಬಡಿದಾಡುವವರ ತೊಡೆಗಳಿಗೆ ಜೋತು ಬೀಳುವನು. ಬಡಿದಾಡುವವರು ಸಿಟ್ಟಿನಿಂದ ಈ ಹುಡುಗನ ಕತ್ತನ್ನು ಹಿಡಿದು ನುಗಿಸಿಕೊಟ್ಟದ್ದೂ ಉಂಟು. ಸಾಲದಲೆ ಕೆನ್ನೆಯ ಮೇಲೆ ಚನ್ನಾಗಿ ಪ್ರಸಾದವನ್ನು ತಿನ್ನಿಸಿದ್ದುಂಟು. ಆದರೂ ಅಷ್ಟೇ ಸಮಾಧಾನದಿಂದ ಮತ್ತೆ ಆ ಗದ್ದಲದಲ್ಲಿ ಸೇರುವ. ಈ ಹುಡುಗನ ಸಾಹಸವನ್ನು ನೋಡಿ ಆ ಕಲಹಪ್ರಿಯರು ತಮ್ಮ ಕಲಹದ ಕಾರಣವನ್ನೇ ಮರೆತು ಈ ಹುಡಗನಿಗೆ ತಾವು ಮಾಡಿದ ಗಾಯಗಳನ್ನು ಕಂಡು ಕಣ್ಣೀರಿಟ್ಟ ಅನೇಕ ಸಂಗತಿಗಳು ಜರಗಿದ್ದವು.

ಕ್ರಮೇಣ ಜಯ ವಿಜಯರಿಬ್ಬರೂ ದೊಡ್ಡವರಾಗಿದ್ದರು. ಜಯನಿಗೆ ೧೧ ವರ್ಷ ತುಂಬಿ ೧೨ ನೆ ವರ್ಷ ನಡೆಯಹತ್ತಿತ್ತು. ೬ ನೆ ಇಯತ್ತೆಯಲ್ಲಿ ಓದುತ್ತಿದ್ದನು. ಊರಲ್ಲಿ ಹೋಳಿ ಹುಣ್ಣಿವೆಯ ಸಲುವಾಗಿ ಹುಡುಗರೆಲ್ಲ ಸಂಜೆಯಾಗುತ್ತಲೆ ನಡು ಹನುಮಪ್ಪನ ಗುಡಿಯಲ್ಲಿ ಸೇರುತ್ತಿದ್ದರು. ಎಲ್ಲರಿಗೂ ಜಯ ಹಂಚಿಕೆ ಹೇಳಿ ಕೊಡುವವನು. ತಾನು ಒಳ್ಳೆ ಕಾಯತಕ್ಕವರ ಕಟ್ಟಿಗೆಯನ್ನೆ ತರಲು ಹೋಗುವನು. ಅಥವಾ ಕಟ್ಟಿಗೆ ಕಾಯುವವರ ಸಂಗಡ ಒಳ್ಳೆ ವಿನಯದಿಂದ ಮಾತಾಡುತ್ತ ಕುಳಿತು ಹಿಂದಿನ ನೋಳದವರಿಗೆ ತುಂಬ ಸಹಾಯ ಮಾಡುವನು.

ಅಂದು ಹುಣ್ಣಿವೆ. ರಾತ್ರಿಯಲ್ಲಿ ಕಟ್ಟಿಗೆ ತುಡುಗು ಮಾಡಿ ಬೆಳಗಿನಜಾವದಲ್ಲಿ ಕಾಮನನ್ನು ಸುಡುವ ಪದ್ಧತಿ. ಅಂದು ಜಯನ ಉತ್ಸಾಹಕ್ಕೆ ಮೇರೆಯೆ ಇಲ್ಲ. ತನ್ನ ಸಂಗಡ ಹತ್ತಿಪ್ಪತ್ತು ಹುಡುಗರನ್ನು ಕಲೆಹಾಕಿಕೊಂಡು ಒಳ್ಳೆ ಸಿಸ್ತಿನಲ್ಲಿ ಆಡ್ಡಾಡುವನು. ಜನ ಯಾರಾದರು ನೋಡಿದರೆ ತನ್ನ ಸಂಗಡಿಗರಿಗೆ ಬುದ್ಧಿ ಹೇಳಲು ಪ್ರಾರಂಭಿಸುವ. "ನೀವು ಹೀಗೆ ಹಿರಿಯರಿಗೆ ತ್ರಾಸ ಕೊಟ್ಟರೆ ಹೇಗೆ? ಪಾಪ ಅವರು ನಿದೆ ಹೋಗಲಿ. ಈಗ್ಗೆ ನಾವು ನಮ್ಮ ನಮ್ಮ ಮನೆಗೆ ಳಿಗೆ ಹೋಗಿ ಮಲಗಿಕೊಳ್ಳೋಣ. ಬೆಳಗಿನ ಜಾವದಲ್ಲಿ ಕಾಮನನ್ನು ನೋಡಲು ಬರೋಣ." ಎಂದು ಮುಂತಾಗಿ ಒತ್ತಿ ಒದರಿ ಹೇಳುವನು.

ರಂಗಾಚಾರ್ಯರು ತಮ್ಮ ಕಟ್ಟಿಗೆಯನ್ನೆಲ್ಲ ತಮ್ಮ ಹಿತ್ತಲದಲ್ಲಿಯೇ ಹಾಕಿಸಿದ್ದರು. ಯಾಕಂದರೆ ಅವರ ಹಿತ್ತಲ ಪ್ರವೇಶ ಮಾಡುವದೆಂದರೆ ಸಾವಿನ ಮನೆಯನ್ನು ಸೇರಿದಂತೆಯೆ. ಅದಕ್ಕೋಸುಗ ಎಲ್ಲರು ತಮ್ಮ ತಮ್ಮ ಹುಡುಗರಿಗೆ ಅವರ ಹಿತ್ತಲಕ್ಕೆ ಹೋಗಬೇಡಿರೆಂದೂ ಮತ್ತು ಅವರು ಭಯ ಪಡುವ ಹಾಗೆ ಅನೇಕ ಕತೆಗಳನ್ನೂ ಹೇಳುತ್ತಿದ್ದರು. ಆದರೆ ಜಯನಿಗೆ ಇಂಥ ಕಥೆಗಳಿಂದೇನು ಪ್ರಯೋಜನ? ಅವನು ಕಲ್ಲೆದೆಯವ. ರಾತ್ರಿಯಲ್ಲಿ ಒಬ್ಬನೆ ಮಸಣಕ್ಕೆ ಹೋಗಿ ಅಲ್ಲಿ ಸುಟ್ಟು ಉಳಿದಂಥ ಕಟ್ಟಿಗೆಯ ತುಂಡುಗಳನ್ನು ತಂದೊಗೆದು ಒಂದು ದೊಡ್ಡ ಗುಂಪನ್ನೆ ಮಾಡಿದ್ದ. ಯಾರೋ ಅವನ ಕಿವಿಯಲ್ಲಿ ರಂಗಾಚಾರ್ಯರ ಹಿತ್ತಲದಲ್ಲಿ ಕಟ್ಟಿಗೆಯ ಆಗರವೆ ಬಿದ್ದಿದೆಂದು ಉಸುರಿದರು. ತೀರಿತು, ಕೇಳುವದೇನು? ಜಯ ತೋಳುಗಳನ್ನು ಏರಿಸಹತ್ತಿದನು. ತನ್ನ ಸಂಗಡ ತನಗೆ ಬೇಕಾದ ನಾಲ್ಕೈದು ಗೆಳೆಯರನ್ನು ಕರೆದುಕೊಂಡು ಹಿತ್ತಲದ ಹಾದಿ ಹಿಡಿದನು. ಸಂಗಡಿಗರ ಎದೆಯು ಮಾತ್ರ ಡಬ ಡಬ ಎನ್ನಹತ್ತಿತು. ದಾರಿಯಲ್ಲಿಯೇ ಅವರು ನಿಂತು ಜಯನ ಕೈಹಿಡಿದು ಮೆಲ್ಲಗೆ "ಜಯಣ್ಣ ಬೇಡ ತಿರುಗಿ ಹೋಗೋಣ. ಅಲ್ಲಿ ದೆವ್ವ ಮತ್ತು ಹಾವುಗಳು ಅವ ಅಂತ. ನಮ್ಮ ಕಾಲುಗಳು ನಡುಗಹತ್ತಿವೆ. ಬೇಕಾದರೆ ನೀನೊಬ್ಬನೆ ಹೋಗಪ್ಪಾ" ಎಂದು ಅವನಿಗೆ ಅಡ್ಡ ಬಂದರು. ಆದರೆ ಜಯನು ಒಮ್ಮೆ ಮನಸ್ಸಿನಲ್ಲಿ ನಿರ್ಧರಿಸಿದರೆ ತೀರಿತು ಬ್ರಹ್ಮನಿಗೂ ಹಿಂದೆ ಸರಿಯುವವನಲ್ಲ. ಅವರಿಗೆ ಹೇಳಿದ. "ನೀವು ಹಿತ್ತಲದಲ್ಲಿ ಬರಬೇಡಿ, ಹೊರಗೇ ನಿಂತು ನಾನು ತಂದುಕೊಟ್ಟ ಕಟ್ಟಿಗೆಗಳನ್ನು ತಂದು ಒಗೆಯಿರಿ" ಅದರಂತೆ ಒಪ್ಪಿಗೆಯಾಗಿ ಎಲ್ಲರು ಹೋದರು. ಇಂದು ಮಾತ್ರ ನಿರುಪಾಯಳಾಗಿ ರಾತ್ರಿ ಮನೆಯಲ್ಲಿ ಉಳಿಯಬೇಕಾಗುತ್ತಿತ್ತು. ರಾತ್ರಿಯ ಜಯನ ಚಟುವಟಿಕೆಗಳು ಇಂದುವಿನ ಪಾಲಿಗೆ ನೋಡಲು ಸಿಗುತ್ತಿದ್ದಿಲ್ಲ. ಅಂತೆ ಈ ಸಾರೆಯಾದರೂ ಅವಳು ಜಯನ ಸಂಗಡವಿದ್ದಿಲ್ಲ. ಜಯ ಹಿತ್ತಲ ಹೊಕ್ಕು ಕಟ್ಟಿಗೆಯ ಕಡೆಗೆ ನೋಡಿ ಒಂದು ಮುಗುಳು ನಗೆ ನಕ್ಕನು. ಯಾಕಂದರೆ ಎಲ್ಲ ಕಟ್ಟಿಗೆ ತುಂಡುಗಳು ತನಗೊಬ್ಬನಿಗೆ ಹೊತ್ತುಕೊಂಡು ಹೋಗಲಿಕ್ಕೆ ಬರುವಂತೆ ಇದ್ದವು. ಒಂದೊಂದಾಗಿ ಹೊರಗೆ ಕೊಡಹತ್ತಿದನು. ಹೊರಗಿನವರು ಒಂದೊಂದರಂತೆ ಕಾಮನ ಕಟ್ಟಿಗೆ ಸಾಗಿಸಿದರು. ಎಲ್ಲವು ಮುಗಿಯುತ್ತ ಬಂದವು. ಜಯನ ಉಬ್ಬು ಹೇಳಲಿಕ್ಕೆ ಅಗದು. "ಆಚಾರ್ಯರು ಹಿಂದಕ್ಕೆ ಪೇರಲ ಹಣ್ಣು ಹರಿದಾಗ್ಗ ಸಭೆ ಸೇರಿಸಿದ್ದರು; ಆದರೆ ನಾಳೆ ಕಟ್ಟಿಗೆಗಳು ಹೋದ ಬದಲಾಗಿ ಏನು ಮಾಡುವರು? ಯಾರ ಮುಂದೆ ಕಿರಿಚಿಕೊಳ್ಳುವರು? ಹನಮಪ್ಪನ ಉತ್ಸವದ ಅಡಿಗೆಯ ಸಲುವಾಗಿ ಒಂದು ಕಟ್ಟಿಗೆಯ ತುಂಡನ್ನೂ ಕೊಡದ ಇವರಿಗೆ ಇಂಥ ಶಾಸನವನ್ನೇ ಮಾಡಬೇಕು!" ಮುಂತಾಗಿ ವಿಚಾರಿಸುತ್ತಿದ್ದನು. ಕಡೆಯ ಒಂದು ಸಣ್ಣ ದೊಡ್ಡೆ ಉಳಿದಿತ್ತು. ಆ ದೊಡ್ಡೆ ಎತ್ತಲು ತನ್ನ ಎರಡೂ ಕೈಗಳನ್ನು ಅದರ ಬುಡದಲ್ಲಿ ಸೇರಿಸಿದನು. ಆದರೆ ಮಾಡುವದೇನು? "ತಾನು ಬಗೆಯುವದೊಂದಾದರೆ ದೈವವೊಂದು ಬಗೆದಿರುತ್ತದೆ." ಎಂಬಂತೆ ಅದರ ಮಗ್ಗಲು ಸ್ವಸ್ಥವಾಗಿ ಮಲಗಿದ ಸರ್ಪವು ಜಯನ ಬಲಗೈಯನ್ನು ಒಳ್ಳೆ ಜೋರಾಗಿ ಕಚ್ಚಿತು. ಹಾಯ! ಜಯನ ಆಯುಷ್ಯದ ಕೊನೆಯಾದಂತಾಯಿತು!! ಜಯ ತನ್ನ ಎರಡು ಕಣ್ಣುಗಳನ್ನು ಹಿರಿದು ಆ ಹಾವನ್ನು ನೋಡಿದನು. ಇನ್ನು ತಾನು ಉಳಿಯುವದಿಲ್ಲೆಂದು ಮೈಜುಮ್ಮೆಂದು ನಡುಗಿತು. ಬಲಗೈಯನ್ನು ಗಟ್ಟಿಯಾಗಿ ಹಿಡಿದುಕೊಂಡು ಮನೆಯ ವರೆಗೆ ಓಡುತ್ತ ಹೋಗಿ ಮಲಗಿದ ತಾಯಿಯನ್ನು ಎಬ್ಬಿಸಿದನು. ತಾಯಿಯ ಮುಂದೆ ಎಲ್ಲ ನಡೆದ ಸಂಗತಿಯನ್ನು ಸತ್ಯವಾಗಿ ಹೇಳಿಬಿಟ್ಟನು. ಅಕಟಕಟ. ಜಯನ ತಾಯಿಯ ಆಗಿನ ಅವಸ್ಥೆಯನ್ನು ಯಾರ ಮುಂದೆ ಹೇಳಬೇಕು! ಅವಳ ಮೇಲೆ ಮುಗಿಲೇ ಕಡಿದುಕೊಂಡು ಬಿದ್ದಂತಾಯಿತು. ಎದೆ ಎದೆ ಬಡಿದುಕೊಂಡು ಅತ್ತಳು. ನೆರೆಯವರೆಲ್ಲರೂ ಬಂದರು, ಭಾಗವತರೂ ಬಂದರು. ಎಲ್ಲ ಔಷಧೋಪಚಾರ ಮಾಡಿಸಿದಾಗ್ಯೂ ಜಯ ಬದುಕಲಿಲ್ಲ. ಜಯ ಕಣ್ಣು ಮುಚ್ಚಿದ! ಕಡೆಯ ವರೆಗೆ ಕಣ್ಣನ್ನೆ ತೆರೆಯಲಿಲ್ಲ!!

† † †

ಬೆಳಗಿನ ೫ ಗಂಟೆಯ ಸಮಯ. ಕಾಮನ ಕಟ್ಟಿಯ ಹತ್ತರ ಕಾಮದಹನ ನಡೆದದೆ. ಆದರೆ ಅಲ್ಲಿ ಒಂದು ಪಿಳ್ಳೆ ಸಹ ಇಲ್ಲ. ಇತ್ತ ಮಸಣದಲ್ಲಿ ಜಯ ದಹನ ನಡೆದದೆ. ಅದೇ ಕಾಮನ ಚಿತೆಯಿಂದ ಜಯನ ಚಿತೆಯು ಹೊತ್ತಿಸಲ್ಪಟ್ಟಿತು. ಜನ ಕಿಕ್ಕಿರಿದಿದೆ. ಬೆಳಗಾದಂತೆ ಜನವೆಲ್ಲ ತಮ್ಮ ತಮ್ಮ ಮನೆಗೆ ತಿರುಗಿತು. ಎಲ್ಲರ ಬಾಯಲ್ಲಿ ರಾತ್ರಿಯ ಅನಾಹುತ ಪ್ರಸಂಗದ ಮಾತೇ ಮಾತು.

ಇಂದುವಿಗಾದ ಅಪಾರ ದುಃಖವನ್ನಾರು ಕಡಿಮೆ ಮಾಡುವವರು. ಅವಳು ಹುಚ್ಚಿಯಾಗಿ ಬಿಟ್ಟಿದ್ದಳು. ಎಲ್ಲರು ಮನೆಗೆ ಬಂದ ಬಳಿಕ ಇಂದು ಯಾರು ನೋಡದಂತೆ ಸುಡುತ್ತಿರುವ ಜಯನ ಹತ್ತರ ಬಂದಳು. ಸುತ್ತಲು ಸಿಡಿದು ಬಿದ್ದ ಕಟ್ಟಿಗೆಗಳನ್ನು ಉರಿಯಲ್ಲಿ ಒಗೆದಳು ಮತ್ತು ಒಂದು ಕಲ್ಲಿನ ಮೇಲೆ ಕುಳಿತುಬಿಟ್ಟಳು. ತಾಸು ಎರಡು ತಾಸುಗಳಾದವು. ಇಂದು ಮಿಸುಕಲಿಲ್ಲ. ಭಾಗವತರು ಬಂದು ಹುಡಗಿಯನ್ನು ಎತ್ತಿಕೊಂಡು ಬಂದು ಹಾಸಿಗೆಯ ಮೇಲೆ ಮಲಗಿಸಿ ಗಾಳಿ ಹಾಕುತ್ತಿದ್ದಂತೆ ಇಂದು ಕಣ್ಣು ತೆಗೆದು "ಜಯ ೩ ಹೋ ೩ ದೆ ೩ ಯಾ" ಎಂದು ಉಸುರಿ ನಿದ್ದೆ ಹೋದಳು. ಆ ದಿನ ಅವಳಿಗೆ ಊಟ ಉಡುಗೆ ಯಾವದರಲ್ಲಿಯೂ ಮನಸ್ಸಿರಲಿಲ್ಲ. ಸಾಯಂಕಾಲವಾಯಿತು. ಗೆಳೆಯರೆಲ್ಲರು ನಡುಮಾರುತಿಯ ಗುಡಿಯಲ್ಲಿ ಸೇರಿದರು. ಇಂದುವು ಬಂದಳು. ಆದರೆ ಒಬ್ಬರೂ ಮಾತಾಡಲಿಲ್ಲ. ಎಲ್ಲರ ಕಣ್ಣಲ್ಲಿ ನೀರು ತುಂಬಿದ್ದವು. ಕಂಠಗಳು ಬಿಗಿದಿದ್ದವು. ಎಲ್ಲರ ಮುಂದೆ ಜಯನ ಮೂರ್ತಿ ಕಾಣಿಯುತ್ತಿತ್ತು. ಆ ಮೂರ್ತಿಯ ಬೆನ್ನು ಹತ್ತಿಯೊ ಏನೊ, ಎಲ್ಲರೂ ಸುಮ್ಮನೆ ಹೊರಟು ಹೋಗಿಬಿಟ್ಟರು.

---

## ಹಿಂದೀ ಆರ್ಥಿಕ ಸ್ಥಾನಮಾನದಲ್ಲಿ ಕ್ರಾಂತಿ

(ಮೊದಲನೇ ಪುಟದಿಂದ ಬಂದುದು)

ಬ್ರಿಟಿಶ ಹಡಗುಗಳು ಹಿಂದುಸ್ತಾನದಿಂದ ಮಂಗನೀಸ ಖನಿಜವನ್ನೂ ಕಚ್ಚಾ ಕಬ್ಬಿಣವನ್ನೂ ತುಂಬಿಕೊಂಡು ಹೋಗಿ ಸಿದ್ಧ ಉಕ್ಕು ಮತ್ತು ಯಂತ್ರಸಾಮುಗ್ರಿಗಳೊಡನೆ ಮರಳುವದೇ ಈ ಅವಧಿಯಲ್ಲಿ ಬ್ರಿಟಿಶರು ಹಿಂದುಸ್ತಾನದೊಡನ್ನಿಟ್ಟುಕೊಂಡಿದ್ದ ಸಾಮ್ರಾಜ್ಯ ಸಂಪರ್ಕವಾಗಿತ್ತು. ಆ ಯುಗ ಇನ್ನಿಲ್ಲ. ಈಗ "ಮುಂಬಯಿ ಯೋಜನೆ" ಯಲ್ಲಿ ಕಾಣಿಸಿದಂತೆ ಹದಿನೈದು ವರ್ಷಗಳಲ್ಲಿ ಹಿಂದುಸ್ತಾನದ ರಾಷ್ಟ್ರೀಯ ಉತ್ಪನ್ನವನ್ನು ಮೂರ್ಮಡಿಯಾಗಿ ಮಾಡುವ ಹಂಚಿಕೆಗಳು ಸಾಧ್ಯವಾಗಬಹುದಾಗಿದೆ.

ಹಿಂದೀ ಮತ್ತು ಯುರೋಪಿಯನ್ ತಾಂತ್ರಿಕರು, ವ್ಯವಸ್ಥಾಪಕರು ಮೊದಲಾದವರ ಮೇಲೆ ಈ ಹೊಣೆ ಬೀಳುವದು. ಅವರ ಮಾನವೀ ಶಕ್ತಿಗೆ ಎಷ್ಟು ದೂರ ನಿಲುಕುವದೆಂಬದೊಂದೇ ಪ್ರಶ್ನೆ.

---




ಜ್ಯೋತಿಷಿ:- ಕೃಷ್ಣಶಾಸ್ತ್ರಿ ಛಲಿ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಏಪ್ರಿಲ ೨೧ ರಿಂದ ೨೭ ರ ವರೆಗೆ

## ಮೇಷ

ಸ್ವತಃ ಮತ್ತು ಹೆಂಡತಿಯು ಪ್ರಕೃತಿ ಕೆಡುವದು. ಮತ್ತು ಬಳಗದಯು ಪ್ರಾಪಂಚಿಕ ತೊಂದರೆ. ಪ್ರತಿ ಯೊಬ್ಬರ ಮನಸ್ಸಿನಲ್ಲಿ ಹೂರ್ತ ತಕ್ಕಿ ಮುದಕ್ಕೆ ಅಂತರ! ಪ್ರತಿಯೊಬ್ಬರು ನಿರರ್ಥಕ ವೆಚ್ಚ ಮಾಡುವರು. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ ಆದರೆ ಲಾಭ ಅನುಕೂಲ ಮತ್ತು ಪ್ರತಿಷ್ಠೆ ಬಹಳ ಪ್ರಶಂಸನೀಯವಾ ದವು. ಸ್ವತಃ ಧಾರ್ಮಿಕ ಮತ್ತು ಶುಭ ಕೃತ್ಯಗಳಲ್ಲಿ ವೆಚ್ಚ ಮಾಡುವರು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅಯುಕ್ತ ತೊತ್ತಿನಲ್ಲಿ ಅಪಯಶಸ್ಸು ಇಲ್ಲವೆ ಹಿಂದೆ ಬೀಳುವ ಸರತಿ. ಪ್ರವಾಸ ಮತ್ತು ಪತ್ರವ್ಯವಹಾರ ತೊಂದರೆಯದು, ಆದರೆ ಭೆಟ್ಟಿಯು ಕೆಲಸ ಉತ್ತಮ. ಅಶ್ವಿನಿಯು ಕೊನೆಯ ೩ ಮತ್ತು ಭರಣಿಯ ೧ ನೆ ಚರಣಕ್ಕೆ ಹೆಚ್ಚು ತೊಂದರೆ. ತಾ. ೨೧, ೨೨, ೨೫ ಅನುಕೂಲ.

## ವೃಷಭ

ಪ್ರಕೃತಿ ಬಹಳ ಉತ್ತಮ. ಅದರಂತೆ ಹೆಂಡತಿ ಮತ್ತು ಮಕ್ಕಳ ಪ್ರಕೃತಿಯೂ ಚೆನ್ನಾಗಿ ಉಳಿಯಲಾ ರದು. ಪ್ರಾಪಂಚಿಕ ಸಮಾಧಾನ ಮನಸ್ಸಿನಂತೆ. ಸ್ನೇಹಿ ಮತ್ತು ಪ್ರಿಯ ಜನರ ಸಹವಾಸ ಮತ್ತು ಅವರ ಆತಿಥ್ಯದಲ್ಲಿ ಮನಸ್ಸು ಗರ್ಕಾಗುವದು. ಉದ್ಯೋಗದಲ್ಲಿ ಉತ್ತಮ ಪ್ರಗತಿ ಒಳ್ಳೆ ಪ್ರತಿಷ್ಠೆ ಮತ್ತು ಅಂದಾ ಜಿಗಿಂತ ಹೆಚ್ಚು ಲಾಭ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಆದರೂ ಒಬ್ಬ ಪ್ರಬಲ ಶತ್ರುವಿನಿಂದ ತಮ್ಮ ಹಾನಿ ಯಲ್ಲಿಯ ಮುಳ್ಳನ್ನು ಅಘೋರ ಮಾರ್ಗದಿಂದ ತೆಗೆದು ಹಾಕುವ ಪ್ರಯತ್ನ ನಡೆಸಿದ ಸುದ್ದಿ ಹತ್ತುವದರಿಂದ ಮನಸ್ಸು ಮತ್ತಷ್ಟು ಬೇಸರಗೊಳ್ಳುವದು. ಭೆಟ್ಟಿ ಗಿಂತ ಪ್ರವಾಸ ಪತ್ರವ್ಯವಹಾರ ಹೆಚ್ಚು ಅನುಕೂಲ. ರೋಹಿಣಿಯು ಕೊನೆಯ ೩ ಮತ್ತು ಮೃಗಾದ ೧ ನೇ ಚರಣಕ್ಕೆ ಹೆಚ್ಚು ಅನುಕೂಲ. ತಾ. ೨೫, ೨೬, ೨೭ ಅನುಕೂಲ.

## ಮಿಥುನ

ನಿಮ್ಮ ಪ್ರಕೃತಿ ಅನುಕೂಲ, ಆದರೆ ಹೆಂಡತಿ ಮತ್ತು ಮಕ್ಕಳ ಪ್ರಕೃತಿ ಕೆಡುವದು. ಎಲ್ಲ ವಿಷಯ ಗಳಲ್ಲಿ ನಿಮ್ಮ ನಿಮ್ಮಲ್ಲಿಯ ಕಲಹದಿಂದ ಬಹಳ ಹುರಸು ಹತ್ತಿ ಪ್ರಾಪಂಚಿಕ ಸಮಾಧಾನದ ಹ್ರಾಸ ಸ್ಥಾವರ ಜಂಗಮಗಳಲ್ಲಿ ಸ್ವಲ್ಪ ಹೊಸ ಹೆಚ್ಚಳ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಲೋಕದೃಷ್ಟಿಯಿಂದ ಬಹಳ ಎದ್ದು ತೋರುವದು. ಆದರೆ ಒಳಗಿಂದೊಳಗೆ ಬಹಳ ಕೆಡುವದು. ಎರಡನೆಯವರ ಬೊಗಸೆಯಿಂದ ನೀರು ಕುಡಿಯುವ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು ಅಲ್ಲದೆ ಶತ್ರುಗಳು ಅಪ ಮಾನ ಮಾಡುವ ಪ್ರಯತ್ನ ನಡೆದುದು. ಮಿತ್ರರು ಅವಸಾನಘಾತಕತನದ ವರ್ತನೆ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೧, ೨೨, ೨೬ ಅನುಕೂಲ.

## ಕರ್ಕ

ಪ್ರಕೃತಿ ಉತ್ತಮ ಅದರಂತೆ ಹೆಂಡತಿ ಮತ್ತು ಪ್ರಾಪಂಚಿಕ ಸುಖ ಮನಸಿನಂತೆ. ಗಂಡು ಹೆಣ್ಣು ಮಕ್ಕಳು ಬಹಳ ಉನ್ನತಿಯಾಗುವದರಿಂದ ವರ್ತನದಲ್ಲಿ ಮತ್ತು ಮಾತಿನಲ್ಲಿ ಗರ್ವದ ಛಟ ಬಹಳ. ಹರ್ಷದಿಂದ ದಾನಧರ್ಮ ಮಾಡುವಿರಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಮತ್ತು ಆಯಾ ಕೆಲಸಗಳಲ್ಲಿ ಮಿತ್ರರ ಮತ್ತು ಜನರ ಸಹಾಯ ತುಂಬ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಆದರೆ ಮನಸಿನ ಒಲವು ಕೆಲವೊಂದು ಕೆಟ್ಟಮಾತಿನತ್ತ. ಆದರೆ ಜನರ ಅಂಜಿಕೆಯಿಂದ ಅದನ್ನು ಹತ್ತಿಕ್ಕುವ ಪ್ರಯತ್ನ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೧, ೨೨, ೨೩, ೨೭ ಅನುಕೂಲ.

## ಸಿಂಹ

ನಿಮ್ಮ ಪ್ರಕೃತಿ ಉತ್ತಮ. ಆದರೆ ಹೆಂಡತಿಯದು ಕೆಡುವದು. ಪ್ರಾಪಂಚಿಕ ಬಹುತರ ವಿಷಯಗಳಲ್ಲಿ ನಿಮ್ಮ ನಿಮ್ಮಲ್ಲಿ ಬಹಳ ಮತಭೇದ. ಉದ್ಯೋಗದಲ್ಲಿ ಪ್ರಗತಿ ಉತ್ತಮ ಮತ್ತು ಪ್ರತಿಷ್ಠೆ ಮತ್ತು ಲಾಭ ತುಂಬ, ಆದರೆ ಆಯಾ ಮಾತುಗಳ ಸ್ವಪ್ನದ ಬಗ್ಗೆ ಮನಸ್ಸು ಬಹಳ ಸಾಶಂಕ, ಮಿತ್ರಪಕ್ಷದಲ್ಲಿ ವಿರೋಧ. ಸ್ಥಾವರದಲ್ಲಿ ಹೊಸ ಹೆಚ್ಚಳ. ಆದರೆ ಅದಕ್ಕಾಗಿ ನಿರ ರ್ಥಕ ವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಹಿಮ್ಮೆಟ್ಟುವದು, ಅಲ್ಪ ಸ್ವಲ್ಪ ಅವಚಿತ ಲಾಭ. ಪ್ರವಾಸಾದಿ ಕೆಲಸ ಮಧ್ಯಮ. ಪೂರ್ವಾದ ಕೊನೆಯ ೩ ಮತ್ತು ಉತ್ತರಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೧, ೨೨, ೨೫, ೨೬ ಅನುಕೂಲ.

## ಕನ್ಯಾ

ಕುಟುಂಬದಲ್ಲಿ ಎಲ್ಲರ ಪ್ರಕೃತಿ ಉತ್ತಮ. ಆದರೆ ಅತ್ರಿಕರಲ್ಲಿಯ ಒಬ್ಬ ದುಷ್ಟ ಚೇತನರು ನಿಮ್ಮ ನಿಮ್ಮಲ್ಲಿ ಒಡಕು ಹುಟ್ಟಿಸುವ ದೊಡ್ಡ ಪ್ರಯತ್ನ ನಡೆಸುವರು. ಪ್ರಾಪಂಚಿಕ ಸುಖ ತೋರಲಿಕ್ಕೆ ಅಂದಚಂದ ಕಾಣಿಸಿದರೂ ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಮತ್ತು ಲಾಭ ಎರಡನೆಯವರಿಗೆ ಜ್ಞಾನ ಹುಟ್ಟಿಸುವಷ್ಟು ಉತ್ತಮ. ಖರ್ಚು ಹೆಚ್ಚು. ವಾದದಲ್ಲಿ ಮತ್ತು ಸ್ಪರ್ಧೆ ಯಲ್ಲಿ ಅನುಕೂಲತೆ. ಮಿತ್ರರಲ್ಲಿ ಒಬ್ಬರು ಸಾಮಾ ಜಿಕ ಅಪರಾಧ ಮಾಡುವದರಿಂದ ನಿಮ್ಮ ಮನಸ್ಸು ಮುಜುಗರ ಮತ್ತು ಗೊಂದಲದಲ್ಲಿ ಬಿದ್ದದ್ದು. ಪ್ರವಾ ಸಾದಿ ಕೆಲಸದಲ್ಲಿಯೂ ಅನುಕೂಲತೆ. ಹಸ್ತಾದ ಕೊನೆಯ ೩ ಮತ್ತು ಚಿತ್ರಾದ ೧ ನೇ ಚರಣಕ್ಕೆ ಸಹ ಜವಾಗಿ ಯಶಸ್ಸು. ತಾ. ೨೫, ೨೬, ೨೭ ಅನುಕೂಲ.

## ತುಲಾ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಬಹಳ ಕೆಡುವ ಸಂಭವ. ಅದರಲ್ಲಿಯೂ ನಿಮ್ಮನಿಮ್ಮಲ್ಲಿ ಕಲಹದ ಜ್ವಾಲೆ ಹೆಚ್ಚುತ್ತ ಹೋಗುವುದು. ಮನೆಯಲ್ಲಿಯ ಕ್ಷುಲ್ಲಕ ಮನುಷ್ಯರಿಂದಲೂ ನಿಮ್ಮ ಅಪಮಾನಮಾಡುವ ಅಂಜಿಕೆ. ಉದ್ಯೋಗದಲ್ಲಿ ಪ್ರಗತಿ ಕುಂಟುತ್ತ ನಡೆ ವುದು. ಆದರೆ ಆ ಮಾನದಿಂದ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆ ಯಲ್ಲಿ ಹಾನಿ ಉಭಯ ಪಕ್ಷದಲ್ಲಿ ಅಷ್ಟೇ. ಮಿತ್ರಸುಖ ಉತ್ತಮ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಸ್ವಲ್ಪ ಅನುಕೂಲ. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೧, ೨೫, ೨೬ ಅನುಕೂಲ.

## ವೃಶ್ಚಿಕ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೆ ಉಭಯತರಲ್ಲಿ ಎರಡನೆಯವರ ತೊಂದರೆ ಮತ್ತು ಉಪಸರ್ಗವನ್ನು ತಪ್ಪಿಸಲು ಬೇಕೆಂತಲೆ ಸುಳ್ಳು ಸುಳ್ಳು ತಿಕ್ಕಾಟ. ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಮಕ್ಕಳಲ್ಲಿ ಪ್ರಗತಿಯ ಘಟನೆ ಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ. ಉದ್ಯೋಗಸ್ಥರಿಗಿಂತ ನೌಕರಿ ಮಾಡುವವ ರಿಗೆ ಹೆಚ್ಚು ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆ ಯಲಿ ಬಹಳ ಅನುಕೂಲತೆ. ಮನರಂಜನೆಯ ಯೋಗ ಮೇಲಿಂದ ಮೇಲೆ, ಮಿತ್ರಸುಖ ಅನುಕೂಲ. ಆದರೆ ಅವರಿಂದಲೆ ವಿಚಾರದ ಬಗ್ಗೆ ಗೊಂದಲ. ಹಳೆ ಯದನ್ನು ಮಾರಿ ಹೊಸದನ್ನು ಕಕ್ಕೊಳ್ಳುವದು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನು ಕೂಲ. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೪, ೨೫, ೨೭ ಅನುಕೂಲ.

## ಧನು

ಪ್ರಕೃತಿ ಕೆಡುವದು. ಆದರೆ ಹೆಂಡತಿ ಮತ್ತು ಪ್ರಾಪಂಚಿಕ ಸುಖ ಅನುಕೂಲ. ಸ್ಥಾವರದಲ್ಲಿ ಅಪೇಕ್ಷೆಗಿಂತ ಹೆಚ್ಚಾದ ಅನುಕೂಲ ಘಟನೆಗಳು, ಉದ್ಯೋಗ ದಲ್ಲಿ ಒಳ್ಳೆ ಪ್ರಗತಿ ದೊಡ್ಡ ಪ್ರತಿಷ್ಠೆ ತುಂಬ ಲಾಭ ಆದರೆ ಪ್ರತಿ ದಿವಸ ಒಗ್ಗದಷ್ಟು ವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ಹಾನಿಯ ಮಾತಿ ದಿಂದ ಸ್ವತಃಕ್ಕೆ ಯಶಸ್ಸು ಇಲ್ಲವೆ ಲಾಭ ಕಡಮೆ. ಪ್ರವಾಸಾದಿ ಕೆಲಸ ಹಿತಕರ. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ೧ ನೇ ಚರಣಕ್ಕೆ ತೊಂದರೆ ಯಿಂದಲೆ ಯಶಸ್ಸು. ತಾ. ೨೧, ೨೨, ೨೬ ಅನು ಕೂಲ.

## ಮಕರ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೆ ಉಳಿದೆಲ್ಲ ವಿಷಯಗಳಲ್ಲಿ ಇದ್ದರೂ ಇಲ್ಲದಂತೆಯೆ. ಪ್ರಾಪಂಚಿಕ ಸುಖ. ಮಕ್ಕಳಲ್ಲಿ ಉನ್ನತಿ ಆದರೆ ಅವರ ವರ್ತನ ಲೋಕಾಪವಾದಿತ. ಸ್ಥಾವರದಲ್ಲಿ ಬಹಳ ಘಟ ನೆಗಳು ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಧಾ ರಣವೆ. ಲಾಭ ಉತ್ತಮ ಆದರೆ ಪ್ರತಿಯೊಂದು ಮಾತಿ ನಲ್ಲಿ ಒಂದೂವರೆ ಪಟ್ಟು ವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಮಿತ್ರಸುಖ ಉತ್ತಮ. ಪ್ರವಾಸಾದಿ ಕೆಲಸ ಮನಸಿನಂತೆ. ಶ್ರವ ಣಾದ ಕೊನೆಯ ೩ ಮತ್ತು ಧನಿಷ್ಠಾದ ೧ ನೇ ಚರ ಣಕ್ಕೆ ತೊಂದರೆ ಕಡಮೆ. ತಾ ೨೩, ೨೪, ೨೬ ಅನು ಕೂಲ.

## ಕುಂಭ

ಪ್ರಕೃತಿ ಸಾಧಾರಣವೆ. ಆದರೆ ಹೆಂಡತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಸ್ಥಾವರದಲ್ಲಿ ಹೊಸ ಹೆಚ್ಚಳ. ಆದರೆ ಅದಕ್ಕಾಗಿ ಅತ್ತರು ಮತ್ತು ನೆರೆ ಹೊರೆಯವರಿಂದ ಬಹಳ ವಿರೋಧ. ಸುಂದರ ವಾಹ ನಗಳಿಂದಲೆ ಪ್ರವಾಸದ ಯೋಗ. ಆದರೆ ದಾರಿಯಲ್ಲಿ ಅಪಘಾತದ ಅಂಜಿಕೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ಯಾತಾ ಯಾತ ವಿಪರೀತ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರ ವ್ಯವಹಾರ ಹೆಚ್ಚು ಅನುಕೂಲ. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾಭಾದ್ರಪದದ ಮೊದಲನೆ ಚರಣಕ್ಕೆ ತೊಂದರೆ ಕಡಮೆ. ತಾ. ೨೧, ೨೨, ೨೫, ೨೬ ಅನುಕೂಲ.

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ-ಕರ್ನಾಟಕ ಮುದ್ರಣಾಲಯದಲ್ಲಿ ‟ಲೋಕ ಶಿಕ್ಷಣ ಟ್ರಸ್ಟದ” ಪರವಾಗಿ ಹ. ರಾ. ಪೋತದಾರ ಯವರಿಂದ ಮುದ್ರಿತವಾಗಿ ಪ್ರಕಟವಾಯಿತು.

# ಪುಸ್ತಕ ಮತ್ತು ವಿಮರ್ಶೆ

(೨ ನೇ ಪುಟದಿಂದ ಬಂದದು)

ದ್ರವ್ಯಗಳನ್ನು ವಿಂಗಡಿಸಿ ಸ್ವತಂತ್ರ ಪ್ರಕರಣಗ ಳಲ್ಲಿ ಅವುಗಳ ವಿವೇಚನೆ, ಭಸ್ಮ-ರಸಾಯನ-ಆಸವಾರಿಷ್ಟ-ಘೃತ-ತೈಲ ಮೊದಲಾದ ಕಲ್ಪಗ ಳನ್ನು ತಯಾರಿಸುವ ವಿಧಾನ-ಮೊದಲಾದ ಇನ್ನೂ ಅವಶ್ಯಕವಾದ ವಿಷಯಗಳನ್ನೂ ಜೋ ಡಿಸಿ-ಗ್ರಂಥವನ್ನು ಇನ್ನಷ್ಟು ಕ್ರಮಬದ್ಧವಾಗಿ ಸಂಗ್ರಹಿಸಿದಲ್ಲಿ-ರಸತಂತ್ರದ ಅಭ್ಯಾಸುಗಳಿಗೆ ಇದಕ್ಕೂ ಹೆಚ್ಚು ಉಪಯುಕ್ತವಾಗುವದರಲ್ಲಿ ಸಂಶಯವಿಲ್ಲ.

**ಮಧುರವಾಣಿ** ಶ್ರೀ ಸುಭಾಷಾಂಕ:

೧೮೬೮ ನೇ ಶಕೆ. ೧೨ ನೇ ವರ್ಷದ ಮೊದಲನೆ ಸಂಚಿಕೆ. ವಾರ್ಷಿಕ ಮೂಲ್ಯ ನಾಲ್ಕು ರೂಪಾಯಿ— ಮಧುರವಾಣಿ ಕಾರ್ಯಾಲಯ ಬೆಳಗಾವಿ.

ಪಂಡಿತ ಗಲಗಲಿ ರಾಮಾಚಾರ್ಯರು ಮತ್ತು ಪಂಡಿತ ಬುರ್ಲಿ ಶ್ರೀನಿವಾಸಾಚಾರ್ಯರ ಸಂಪಾದ ಕತ್ವದಲ್ಲಿ ಮಧುರವಾಣಿ .ಸಂಸ್ಕೃತ ಮಾಸ ಪತ್ರಿಕೆ ಕಳೆದ ಹನ್ನೆರಡು ವರುಷಗಳಿಂದ ಸುರ ಭಾರತೀ ಸೇವೆಯನ್ನು ಮಾಡುತಿದೆ. ಮೃತ ಭಾಷೆಯೆಂದು ತಿಳಿಯಲ್ಪಡುತಿರುವ ಸಂಸ್ಕೃತ ಭಾಷೆಯ ಪ್ರಚಾರ ಜನಸಾಮಾನ್ಯರಲ್ಲಿಯೂ ಆಗ ಬೇಕೆಂಬ ಉಚ್ಚ ಉದ್ದೇಶವನ್ನಿಟ್ಟುಕೊಂಡು ಸರಳ ಸುಂದರ ಭಾಷೆಯಲ್ಲಿ ಮಧುರವಾಣಿ ಜನ ಸೇವೆಗೈಯುತ್ತದೆ. ಕಾಲಿದಾಸಾಂಕ, ಸುಭಾ ಷಾಂಕ ಮೊದಲಾದ ವಿಶೇಷ ಸಂಚಿಕೆಗಳನ್ನು ತೆಗೆದು ಸಂಸ್ಕೃತ ಸಾಹಿತ್ಯದ ಬಗ್ಗೆ ಜನತೆಯಲ್ಲಿ ಹೆಚ್ಚು ರುಚಿಯನ್ನು ಹುಟ್ಟಿಸುವ ಪ್ರಯತ್ನ ಮಾಡಲಾಗುತಿದೆ. ಸ್ವಾತಂತ್ರ್ಯಪ್ರೇಮಿ ಸುಭಾಷಚಂದ್ರರ ಜೀವನ ಚರಿತ್ರೆಯನ್ನು ಬಣ್ಣಿಸಿ ಭಾರತೀಯರಲ್ಲಿ ಸ್ವಾತಂತ್ರ್ಯಜ್ಯೋತಿಯನ್ನು ಹೊತ್ತಿಸುವುದಕ್ಕಾಗಿ ಈ ಸುಭಾಷಾಂಕನ್ನು ಹೊರಡಿಸಲಾಗಿದೆ. ಸಾಮಾನ್ಯವಾಗಿ ವೃತ್ತಪತ್ರ ಗಳನ್ನೋದದಂಥ ಸಂಸ್ಕೃತಾಭಿಜ್ಞರಿಗೆ ಶೂರ ಸೇನಾಪತಿ ನೇತಾಜಿಯ ಉಜ್ವಲ ಜೀವನದ ಪರಿ ಚಯ ಇದರಿಂದ ಚೆನ್ನಾಗಿ ಆಗುವದು. ಸುಭಾ ಷಚಂದ್ರರ ಜೀವನದಿಂದ ಭಾರತೀಯರು ಕಲಿ ಯತಕ್ಕ ಪಾಠನ್ನು ಇದರಲ್ಲಿ ತೋರಿಸಲಾಗಿದೆ. ಸಂಸ್ಕೃತ ಸಾಹಿತಿಗಳು ಈ ಸುಭಾಷಾಂಕವ ನ್ನೋದಿ ಸುರಭಾರತಿಯ ಸುಧೆಯನ್ನು ಸವಿ ಯುವುದಲ್ಲದೆ ಸ್ವಾತಂತ್ರ್ಯ ಸಾಮ್ರಾಟ ಸುಭಾ ಷರ ಸಾಹಸ ಜೀವನವನ್ನು ತಿಳಿದುಕೊಂಡು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಾವು ವಹಿಸತಕ್ಕ ಪಾತ್ರವನ್ನು ನಿರ್ಧರಿಸಬೇಕು. ಮಧು ರವಾಣಿಯು ಚಿರಾಯುವಾಗಿ ಇದರಂತೆ ಅಮರ ವಾಣಿಯು ಸೇವೆಗೈಯಲಿ.

## Indian National Congress

by Acharya J. B. Kriplani. Publishers Vora & Co. Ltd. Bombay 2. Crown octavo pp. 72. Price One Rupee.

ರಾಷ್ಟ್ರಪತಿ ಆಚಾರ್ಯ ಕೃಪಲಾನಿಯವರು ಹಿಂದೀ ರಾಷ್ಟ್ರೀಯ ಮಹಾಸಭೆಯ ಮೂಲಭೂತ ಸ್ಥಾನ ಮಾನಗಳನ್ನೂ ರಾಷ್ಟ್ರೀಯ ಸ್ವಾತಂತ್ರ್ಯದಲ್ಲಿ ಅದು ಪಡೆದ ಸ್ಥಾನವನ್ನೂ ಕೂಲಂಕಷವಾಗಿ ಚರ್ಚಿಸಿದ್ದಾರೆ. ಹಿಂದುಸ್ತಾನದಲ್ಲಿರುವ ಕಾಂಗ್ರೆಸ್ಸೇತರ ಪಕ್ಷ ಪಂಗಡಗಳು ಹಿಂದೀ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೇಗೆ ಅಡ್ಡಗಾಲು ಹಾಕುತಿರುವ ರೆಂಬುದನ್ನು ಇದರಲ್ಲಿ ಆನುಷಂಗಿಕವಾಗಿ ಚರ್ಚಿ ಸಲಾಗಿದೆ. ಐದು ಪ್ರಕರಣಗಳಲ್ಲಿ ಆಚಾರ್ಯರು ಇವನ್ನೆಲ್ಲ ವಿವರಿಸಿದ್ದಾರೆ. ಕಾಂಗ್ರೆಸ್ಸಿನಲ್ಲಿದ್ದು ಕೊಂಡು ಅದಕ್ಕೆ ಏಕನಿಷ್ಠರಾಗಿ ನಡೆಯದಿರುವು ದರಿಂದ ಉಂಟಾಗಬಹುದಾದ ಗಂಡಾಂತರಗ ಳನ್ನು ವಿವರಿಸಿದ್ದಾರೆ. ಯಾವುದೊಂದು ಸಂಸ್ಥೆ ಊರ್ಜಿತ ಸ್ಥಿತಿಗೆ ಬರಬೇಕಾದರೆ ಆ ಸಂಸ್ಥೆ ಯಲ್ಲಿಯ ಸದಸ್ಯರು ಅತ್ಯಂತ ನಿಷ್ಠಾವಂತರಾಗಿ, ಶಿಸ್ತಿಗೊಳಗಾಗಿ ಇರುವದವಶ್ಯವೆಂದು ಬೇರೆ ಹೇಳಬೇಕಿಲ್ಲ. ಸದ್ಯದ ಪರಿಸ್ಥಿತಿಯಲ್ಲಿಯಂತೂ ಇದು ಅತ್ಯಂತ ಅವಶ್ಯವಾಗಿದೆ. ಆಚಾರ್ಯರ ಅಧಿಕಾರಸಂಪನ್ನ ಲೆಕ್ಕಣಿಕೆಯಿಂದ ಹೊರಬಿದ್ದ ಈ ಪುಸ್ತಕದಲ್ಲಿಯ ವಿಚಾರಗಳನ್ನು ಇಂಗ್ಲೀಶ ಬಲ್ಲವರೆಲ್ಲ ತಿಳಿದುಕೊಂಡು ಅದರಂತೆ ನಡೆದರೆ ಆಚಾರ್ಯರ ಶ್ರಮದ ಪರಿಹಾರವಾಗುವದು.

## India-Facts In brief

by Anup Singh Secretary National Committee for India's Freedom, 1129. Vermont Avenue, Washington 5- D. C.

ಸ್ವಾತಂತ್ರ್ಯ ಪಥದಲ್ಲಿ ಸಾಗಿದ ಹಿಂದುಸ್ತಾನದ ಬಗ್ಗೆ ಸಂಗತಿಗಳನ್ನು ತಿಳಿದುಕೊಳ್ಳುವದವಶ್ಯ ವಾಗಿದೆ. ಅಸ್ವತಂತ್ರ ಹಿಂದುಸ್ತಾನದ ಬಗ್ಗೆ ಪರ ರಾಷ್ಟ್ರಗಳಲ್ಲಿ ಬೇಕಾದಷ್ಟು ಅಪಪ್ರಚಾರ ನಡೆ ದುದು ಸರ್ವಶ್ರುತ. ಹಿಂದುಸ್ತಾನದ ಹಿತದ್ರೋಹಿ ಗಳು ಬೇಕೆಂತಲೆ ಈ ಬಗೆಯ ಅಪಪ್ರಚಾರ ಮಾಡಿದ್ದೂ ಉಂಟು. ಹಲವು ಸಂದರ್ಭಗಳಲ್ಲಿ ನಿಜ ವಾದ ಸಂಗತಿಗಳು ತಿಳಿಯದೆ ಹಿಂದುಸ್ತಾನದ ಬಗ್ಗೆ ತಪ್ಪುತಿಳುವಳಿಕೆ ಮಾಡಿಕೊಂಡದ್ದೂ ಉಂಟು. ಇವನ್ನೆಲ್ಲ ಹೋಗಲಾಡಿಸಿ ಹಿಂದುಸ್ತಾನದ ಬಗ್ಗೆ ನಿಜ ಸಂಗತಿಗಳನ್ನು ತಿಳಿಸುವದು ಹಿಂದೀಯರೆಲ್ಲರ ಕರ್ತವ್ಯವಾಗಿದೆ. ಶ್ರೀ ಅನುಪಸಿಂಗರು ಇದನ್ನು ಈ ಚಿಕ್ಕ ಹೊತ್ತಿಗೆಯಲ್ಲಿ ಚೆನ್ನಾಗಿ ಸಾಧಿಸಿದ್ದಾರೆ. ಅಮೇರಿಕೆಯಂಥ ಪ್ರಗತಿಪರ ರಾಷ್ಟ್ರದಲ್ಲಿದ್ದು ಕೊಂಡು ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ಸಂಸ್ಥೆಯನ್ನು ಕಟ್ಟಿಕೊಂಡು ಕಾರ್ಯ ಮಾಡುತಿರು ವ ಸಂಘದಿಂದ ಈ ಪುಸ್ತಕವು ಪ್ರಸಿದ್ಧವಾದುದು ಮತ್ತಷ್ಟು ಸಂತೋಷದಾಯಕ. ಇವರ ಪ್ರಯತ್ನ ದಿಂದ ಹಿಂದುಸ್ತಾನದ ಬಗ್ಗೆ ಜಗತ್ತಿನಲ್ಲಿ ನಿಜ ಸಂಗತಿಗಳು ಗೊತ್ತಾಗಿ ಅದಕ್ಕೆ ತಕ್ಕ ಸ್ಥಾನ ಮಾನಗಳು ಸಿಕ್ಕಲೆಂದು ಹಾರಯಿಸಲಾಗಿದೆ.

## ಮೀನ

ಎಲ್ಲರ ಪ್ರಕೃತಿ ಉತ್ತಮ. ಆದರೆ ಬಹಳ ಆಗಂ ತುಕ ಕಾರಣಗಳಿಂದ ಪ್ರಾಪಂಚಿಕ ತೊಂದರೆ ಇದ್ದದೆ. ಪ್ರಿಯ ಮತ್ತು ಅಪ್ರಿಯ ಜನರ ಸಹವಾಸ ಒಂದೇ ಕಾಲಕ್ಕೆ ಸಂಭವಿಸುವ ಯೋಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ವೆಚ್ಚವೂ ಅಳತೆ ಮೀರಿ. ಮಿತ್ರ ಸುಖ ಉತ್ತಮ. ಲೋಕಪ್ರಶಂಸೆಯಾಗುವಂತಹ ಬೌದ್ಧಿಕ ಕೆಲಸಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಅನು ಕೂಲ. ಉತ್ತರಾಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨೧, ೨೨, ೨೬ ಅನುಕೂಲ.